# ಬಣ್ಣದ ಕಾರಂಜಿ

(ಪ್ರೇಮಗೀತೆಗಳು)



# ಬಣ್ಣದ ಕಾರಂಜಿ

( ಪ್ರೇಮಗೀತೆಗಳು )



( ಪ್ರಿನ್ಸಿಪಾಲ ವ್ಹಿ. ಕೆ. ಗೋಕಾಕರ ಕೆಳೆನುಡಿಯೊಂದಿಗೆ )



ಮಹದೇವ ಬಣಕಾರ

ಅಗಸ್ಟ ೧೫, ೧೯೫೪ ]  [ ಬೆಲೆ : ೧-೦-೦

ಪ್ರಕಾಶಕರು :

ಶ್ರೀ. ರುದ್ರನ್ ಕೆ. ಹಳ್ಳಿಕೇರಿ ಬಿ. ಎಸ್‌ಸಿ. ( ಅಗ್ರಿ. )
ಅಧ್ಯಾಪಕರು,
ಕರ್ನಾಟಕ ಪ್ರಾದೇಶಿಕ ಸಹಕಾರಿ ಶಾಲೆ, ಧಾರವಾಡ.



ಮೊದಲ ಮುದ್ರಣ—೧೯೫೩.

ಬೆಲೆ : ಒಂದು ರೂಪಾಯಿ



ಮಾರಾಟಗಾರರು :

೧. ಕಾವ್ಯಕುಟೀರ ಸಪ್ತಾಪೂರ, ಧಾರವಾಡ.
೨. ಸಾಹಿತ್ಯ ಭಾಂಡಾರ, ಹುಬ್ಬಳ್ಳಿ.
೩. ಸಮಾಜ ಪುಸ್ತಕಾಲಯ, ಧಾರವಾಡ.
೪. ಶಿವಪೂರ ಬಂಧುಗಳು, ಧಾರವಾಡ.

ಮುದ್ರಕರು :

ಶ್ರೀ. ವಿನೀತ ರಾಮಚಂದ್ರರಾಯರು
ಉದಯ ಮುದ್ರಣಾಲಯ, ಧಾರವಾಡ.

# ಕೆಳೆನುಡಿ

ಕವಿ ಮಹದೇವಣ್ಣನವರ ಈ ಪ್ರೇಮಗೀತಗಳನ್ನು ಓದಿ ನಾನು ಬಹಳ ಸಂತೋಷಪಟ್ಟಿದ್ದೇನೆ. "ಕಾವ್ಯೋದಯ"ದಿಂದ ಈಗಾಗಲೇ ಅವರು ರಸಿಕರಿಗೆ ಪರಿಚಿತರಾಗಿದ್ದಾರೆ. ಅವರ ಶೈಲಿಯಲ್ಲಿ ಒಂದು ಸರಲತೆ ಇದೆ. ಅವರ ಛಂದಸ್ಸಿನಲ್ಲಿ ಒಂದು ಸಹಜವಾದ ಓಟವಿದೆ, ಮಾಧುರ್ಯವಿದೆ. ಅವರ ನೈಜ ಕವಿಹೃದಯವನ್ನು ಅವರ ಒಂದೊಂದು ಕವಿತೆಯಿಂದಲೂ ಗುರುತಿಸಬಹುದು.

ಇಲ್ಲಿಯ ಪ್ರೇಮಗೀತಗಳಲ್ಲಿ ಒಂದು ಚಿತ್ತಾಕರ್ಷಕವಾದ ಸಾತ್ವಿಕತೆಯು ತುಂಬಿಕೊಂಡಿದೆ. ಕವಿಯು ಜೊತೆಯಲ್ಲಿ ಒಂದು ಹಿರಿಯ ಸಫಲತೆಯನ್ನು ಕಂಡಿದ್ದಾನೆ. ಪ್ರೇಮವನ್ನು ಬರಿ ಕಾಮವಾಗಿಸಿದರೆ ಮಾನವನು ತನ್ನ ಸಂಸ್ಕೃತಿಯನ್ನು ಕಳೆದುಕೊಳ್ಳುತ್ತಾನೆ. ನಿಸರ್ಗಸಹಜವಾದ ಕಾಮಕ್ಕೆ ಪ್ರೇಮದ ಹದವನ್ನು ತಂದುಕೊಟ್ಟರೆ, ಹಿರಿಯ ಸಂಸ್ಕೃತಿಯ ಅಡಿಗಲ್ಲನ್ನು ಅವನಿಡುತ್ತಾನೆ. ಈ ಸಂಗ್ರಹದಲ್ಲಿ ಪ್ರೇಮದ ವಿವಿಧ ಆವಿರ್ಭಾವಗಳು ಪ್ರಕಟವಾಗಿವೆ.

"ನನ್ನ ನಿನ್ನ ನೋಟದಲ್ಲಿ
ನೈಜ ಬೆಳಕು ಹರಿಯುವಲ್ಲಿ
ಸಗ್ಗವಿಳೆಗೆ ಬಂದು ಸೊಗವ ಸೂಸುತಿದ್ದಿತು!"

ಎಂದು ಕವಿಯು ಜೊತೆಯ ಮಹತಿಯನ್ನು ಬಣ್ಣಿಸುತ್ತಾನೆ. ನವೀನ ಪ್ರಣಯ ಹಾಗೂ ವಿರಹದ ಚಿತ್ರಣದಲ್ಲಿ ಕವಿಯು ಲೀನವಾಗುತ್ತಾನೆ.

"ಕಾಮಕ್ಕೆ ಬಂದಿಲ್ಲ,
ಪ್ರೇಮಕ್ಕೆ ಬಂದಲ್ಲ;
ಬಂದಿರುವೆ ನಿಂದಿರಲು ಸಂಗಾತಿಯಾಗಿ"

ಎಂದು ಉನ್ನತ ಜೀವನದ ಉಗಮವಾದ ಜೊತೆಯನ್ನೇ ಕವಿಯು ನೆನೆಯುತ್ತಾನೆ.

" ಹೊಮ್ಮುತಿರಲಿ, ಹರಿಯುತಿರಲಿ,
ಪ್ರೇಮವೆಂಬ ರಾಗವು;
ಒಲವು ಬಲವು ಒಂದುಗೂಡಿ
ಕೂಡಿಬರಲಿ ಯೋಗವು ! "

ಎಂಬ ಕವಿಯ ವಿಕಸನಾಭಿಲಾಷೆಗೆ ಯಾರೂ ದನಿಗೂಡಿಸಬಹುದು. ಇಲ್ಲಿ ಪರಿಶುದ್ಧ ಭಾವವಿದೆ. ಅದನ್ನು ಸ್ಫುರಿಸುವ ಜೊತೆಯಿದೆ. ಜೀವನವು ವಿಶಾಲವಾಗಬೇಕೆಂಬ ಉತ್ಕಟವಾದ ಹಪಾಪಿಕೆಯಿದೆ. ಈ ಹವಣಿಕೆ ತನ್ನದೇ ಆದ ಆಳ-ಎತ್ತರ-ಬಿತ್ತರಗಳನ್ನು ಪಡೆದುಕೊಳ್ಳಲಿ.

ಕರ್ನಾಟಕ ಕಾಲೇಜ,
ಧಾರವಾಡ
೨೫-೫-೫೩

—ವಿ. ಕೃ. ಗೋಕಾಕ.

# ನಿವೇದನೆ

ಭಕ್ತಾಂಜಲಿ ಪುಟನಾಗಿ ದೇವನೆದುರಿಗೆ ನಿಂತ ಭಕ್ತನು, ತನ್ನೆಲ್ಲ ಮನಸ್ಸು, ಭಾವ, ಬುದ್ಧಿಗಳನ್ನು ಒಂದುಗೂಡಿಸಿ, ಪವಿತ್ರಾತ್ಮದಿಂದ ಏಕಚಿತ್ತನಾಗಿ, ದೇವನನ್ನು ಧ್ಯಾನಿಸುವಂತೆ ಪ್ರಣಯಿಗಳು ಪ್ರೇಮಯೋಗಿನಿಯ ಕೃಪಾಯಾಚನೆಗಾಗಿ ತಪಸಂಗೈಯುತ್ತಾರೆ. ನಲಿದು, ಒಲಿದು ನರ್ತಿಸುತ್ತಾರೆ.

" ಚಿದ್ ವಿಭಾತಿ ಬೆಳಗಲಿನಿಯು
ಪ್ರೇಮ ಕಾಣದಿರಲಿ ಕೊನೆಯು
ಮನ್ಮನೋ ವಿರಾಜದಿ "

ಎಂದು ಪ್ರಣಯಿ ಸೂಚಿಸುತಿರೆ,

ಮೈಗೆ ಮೈ ಸೋಂಕಿದರೆ
ನನಗದುವೆ ನಾಕ;
ನಾನು-ನೀನೊಂದಾಗೆ
ಹರನಿಗ್ಯಾಷೇಕಂ !

ಎಂದು ಪ್ರೇಮಿ ಪ್ರೇಯಸಿಗೆ ಉತ್ತರಿಸುತ್ತಾನೆ. ಹೀಗೆ ದಂಪತಿಗಳು ಆತ್ಮಾನುರಾಗದಿಂದ ಸರಸವಾಡುತ್ತಿರುವಾಗ ಅವರಿಗೆ ಬಾಹ್ಯಜಗತ್ತಿನ ಬೆಳಕು ಕಾಣಿಸದು. ಅಂತರಂಗದ ಆಕಾಶದಲ್ಲಿ ಹರಿಯುವ ಹಾಲುಹೊಳೆಯು ಸ್ವಚ್ಛಂದ ತೆರೆಯೇ ಅವರಿಗೆ ಸಾಕು. ಪ್ರೇಯಸಿ ಪ್ರಿಯತಮರ ಆ ಮಧುರ ಬಾಂಧವ್ಯದಲ್ಲಿ ಅಸಾಮಾನ್ಯ ರಾಗದ ಸುಗ್ಗಿಯೋ, ಅವರಿಗೇ ಗೊತ್ತು!

ಏಕಾಂತದಲ್ಲಿ ನಲ್ಲನಲ್ಲೆಯರು ಪ್ರೇಮದ ಸಿದ್ಧಿಗಾಗಿ ರಸಋಷಿಗಳಂತೆ ಯೋಗಕೆಳಸುತ್ತಾರೆ.

" ದೇವ ಒಂದೆ, ಆತ್ಮ ಒಂದೆ, ಪ್ರೇಮ ಒಂದೆ "

ಎಂದು ಜಪಿಸುತ್ತಾರೆ.

" ಅವನ ಕೂಡುವನಕ ನಮ್ಮ ಬಾಳಿನೊಸಗೆಯಾಗಲಿ ! "

ಎಂದು ಹಾರೈಸುತ್ತಾರೆ.

ಆ ತಪಸ್ಸಿನ ಸಿದ್ಧಿಗಾಗಿ ಅನವರತ ತಪವಂಗೈಯುವ ಪ್ರಣಯಿಗಳು

"ಆತ್ಮಸಮ್ಮಿಲನದಲಿ
ಪ್ರಣಯಾನುರಾಗದಲಿ
ಮೂಡಿ ಬಂದಿಹ ಜಗವೆ ಬಾಳ್ಕೆಗಿರಲಿ!"

ಎಂದು ಒಬ್ಬರೊಳಗೊಬ್ಬರಡಗಿ, ಪ್ರೇಮಯೋಗಿನಿಗೆ ನಿವೇದಿಸಿಕೊಳ್ಳುತ್ತಾರೆ. ಆಗ ಪ್ರೆಮಯೋಗಿನಿಯು

"ಪ್ರಣಯದ ಪ್ರೆಮವು ನಿರ್ಮಲವಾಗಿರೆ
ಮುಕ್ತಿಯ ಮೆಟ್ಟಲು ತೋರುತಿದೆ."

ಎಂದು ಹೇಳಿ, "ತಥಾಸ್ತು" ಎಂದು ಆಶೀರ್ವದಿಸುತ್ತಾಳೆ. ಅದನ್ನು ಕೇಳಿ ಸೃಷ್ಟಿಕರ್ತನಾದ ಬ್ರಹ್ಮನು ವಿಸ್ಮಯಾಂಬುಧಿಯಲ್ಲಿ ತೇಲುತ್ತಾನೆ. ಹಾಗೆಯೇ ಅಚ್ಚರಿಗೊಂಡು ಉಸುರುತ್ತಾನೆ.

"ನನ್ನ ಕಲೆ ಎಲ್ಲದರ
ಸಾರವೀ ಸೃಷ್ಟಿ
ಆದರೇಕಿಲ್ಲಯ್ಯೋ
ಪ್ರಣಯಿಗಳ ದೃಷ್ಟಿ!
ಎಲ್ಲ ಮರೆತಿಹನಲ್ಲನಲ್ಲೆಯರು ಇವರು
ಎರಡಾತ್ಮಕೊಂದೆ ಹೂ ಅರಳಿಸಿಹರು!"

ಹೀಗೆ ಬ್ರಹ್ಮನು ಆ ಪ್ರಣಯಿಗಳ ಪ್ರಣಯವನ್ನು ಕಂಡು ಅಚ್ಚರಿಯಾಗಿ, ಮೆಚ್ಚಿ, ಅವರಿಗೆ ಸುಖವಾಗಲಿ ಎಂದು ಅವನೂ ಪ್ರೇಮಯೋಗಿನಿಯಂತೆ ಆಶೀರ್ವದಿಸುತ್ತಾನೆ.

ಹೀಗೆ ಆಶೀರ್ವಾದವನ್ನು ಪಡೆದ ಪ್ರೇಯಸಿ–ಪ್ರಿಯಕರರು

"ಮಧುಮಯ ಮಿಲನದಿ ಮಳೆಬಿಲ್ಲಿನ ಮಳೆಗರೆಯುತಿದೆ!"

ಎಂದು ನಿರ್ಮಲಾಂತಃಕರಣಿಗಳಾಗಿ ಮೆರೆಯುತ್ತ,

"ನನಗೆ ನೀನು–ನಿನಗೆ ನಾನು"

ಎಂದು ಹೇಗೋ ಹೇಗೋ ಹೊಂದಿಕೊಳ್ಳುತ್ತಾರೆ.

ಇಂಥ ವಿವಿಧ ಪ್ರೇಮಭಂಗಿಗಳ ಜೀವನರಸವಿಪಾಕದಿಂದ ಬಾಳಿನಲ್ಲಿ "ಬಣ್ಣದ ಕಾರಂಜಿ" ಭಾವಾವೇಶದಿಂದ ಪುಟಿಯುತ್ತಿರಬೇಕಲ್ಲವೇ ?

ಈ ಪ್ರೇಮಸಂಕಲನಕ್ಕೆ ಮುನ್ನುಡಿ ಬರೆಯಲು ಗಣ್ಯ ವಿಮರ್ಶಕರೂ ಉತ್ತಮ ಕವಿಗಳೂ ಆದ ಶ್ರೀಮಾನ್ ವ್ಹಿ. ಕೆ. ಗೋಕಾಕರಿಗೆ ಬಿನ್ನವಿಸಿ ಕೊಂಡೆನು. ಶ್ರೀಯುತರು ಮುನ್ನುಡಿಯ ರೂಪಾಂತರವಾದ 'ಕಳೆನುಡಿ' ಯನ್ನು ದಯಪಾಲಿಸಿ, ಮಹದುಪಕಾರವನ್ನು ಮಾಡಿದ್ದಾರೆ. ಅಂತೆಯೇ ನನ್ನ ಕಾವ್ಯಗುರು ಕಾವ್ಯರ್ಷಿ ಸಾಲಿ ರಾಮಚಂದ್ರರಾಯರು ಎಂದಿನಂತೆಯೇ ಕಾವ್ಯಪರಿಷ್ಕರಣ ಕಾಲದಲ್ಲಿಯೂ ಅನೇಕ ಸಲಹೆ-ಸೂಚನೆಗಳನ್ನಿತ್ತರಲ್ಲದೆ ಅಭಿಪ್ರಾಯವನ್ನು ಕೊಟ್ಟು ಆಶೀರ್ವದಿಸಿದ್ದಾರೆ.

ಇನ್ನು ವಿಜ್ಞಾನಪ್ರವೃತ್ತಿಯವರಾಗಿದ್ದರೂ, ಸಾಹಿತ್ಯದ ಸದಭಿರುಚಿಯಿಂದ ಯಾವುದೇ ಪ್ರತಿಫಲಾಪೇಕ್ಷೆಯನ್ನು ಬಯಸದೆಯೇ ಉದಾರ ಮನಸ್ಸಿನಿಂದ ಈ ಪುಸ್ತಕದ ಪ್ರಕಾಶನ ಹೊಣೆ ಹೊರಲು ಮುಂದೆ ಬಂದ ಶ್ರೀಮಾನ್ ರುದ್ರಪ್ಪ ಕಲ್ಯಾಣಪ್ಪ ಹಳ್ಳೀಕೇರಿ (ಬಿ. ಎಸ್‌ಸಿ. ಅಗ್ರಿಕಲ್ಚರ) ಅವರಿಗೆ ಹಾರ್ದಿಕ ವಂದನೆಗಳನ್ನು ಅರ್ಪಿಸುತ್ತೇನೆ. ಇದೇ ರೀತಿ ಇನ್ನು ಮುಂದೆಯಾದರೂ ಅವರ ಉದಾರತನವು ಬೆಳೆದು ಬೆಳಕುಕಾಣಲೆಂದು ಹಾರೈಸುತ್ತೇನೆ. ಅಂತೆಯೇ ಎಂದಿನಿಂದಲೂ ನೆರವಾಗಿ ನಿಂತು, ಸಹಾಯ ಸಲ್ಲಿಸುತ್ತ ಬಂದ ನನ್ನೂರ ಗೆಳೆಯರನ್ನೂ ನಾನಿಲ್ಲಿ ನೆನೆಯದಿರಲಾರೆ.

"ಬಣ್ಣದ ಕಾರಂಜಿ" ಪ್ರಕಟವಾಗದ ಮುನ್ನವೇ ಕೆಲಕೆಲವು ಕವನಗಳನ್ನು ಪ್ರಕಟಿಸಿ ಬೆಳಕು ತಂದುಕೊಟ್ಟ ಆಯಾ ಪತ್ರಿಕೆಗಳ ಸಂಪಾದಕರನ್ನೂ ಹಾಗೂ ತಾವು ಗಾಯನ ಶಾಲೆಗಳನ್ನು ಏರ್ಪಡಿಸಿದಲ್ಲೆಲ್ಲ ಈ ಸಂಗ್ರಹದ ಬಹು ಭಾಗವನ್ನು ಸುರಮ್ಯವಾಗಿ ಹಾಡಿ, ಪ್ರಚುರಪಡಿಸಿದ ಹುಟ್ಟು ಕಲಾವಿದ ಶ್ರೀಮಾನ್ ಸಿ. ಕೆ. ಕುರವತ್ತಿಯವರನ್ನೂ ಅಭಿನಂದಿಸುತ್ತೇನೆ.

ಕೊನೆಯದಾಗಿ ಅಲ್ಪಾವಧಿಯಲ್ಲಿಯೇ ಅಂದವಾಗಿ ಮುದ್ರಿಸಿಕೊಟ್ಟ 'ಉದಯ' ಮುದ್ರಣಾಲಯದ ಒಡೆಯರಿಗೆ ನನ್ನ ವಂದನೆಗಳು.

ಕಾವ್ಯಕುಟೀರ, ಸಪ್ತಾಪೂರ
ಧಾರವಾಡ.
ಆಗಸ್ಟ ೧೫, ೧೯೫೩

— ಮಹದೇವ ಬಣಕಾರ

# ಇದೇ ಲೇಖಕರ ಇನ್ನಿತರ ಕೃತಿಗಳು

## ಅಚ್ಚಾಗಿವೆ

ಕಾವ್ಯೋದಯ .... ( ಕವನ ಸಂಕಲನ )

ಬಣ್ಣದ ಕಾರಂಜಿ .... ( ಪ್ರೇಮಗೀತೆಗಳು )

## ಅಚ್ಚಾಗಲಿವೆ

ಅಲುಗಿದ ಆತ್ಮ .... ( ಸಾಮಾಜಿಕ ಕಾದಂಬರಿ )

ಬಯಲುಬಾಳು .... ( ಕಥಾಸಂಕಲನ )

ಗರತಿಯರ ಗೋಳು .... ( ಮೂರಂಕಿನ ನಾಟಕ )

ಬೆಳುದಿಂಗಳು .... ( ಇಂಗ್ಲಿಷ ಗೀತಾನುವಾದ )

ಕಾಲಭೈರವಿ .... ( ರುದ್ರಗೀತೆಗಳು ).

# ಪ್ರಕಾಶಕರ ಬಿನ್ನಹ

ಸಾಹಿತ್ಯ ಕ್ಷೇತ್ರವು ಪರಮ ಭೂಮಾವಾಗಿದೆ. ಜನಜೀವನದ ವಾಣಿಯಾಗಿದೆ. ಸಾಹಿತ್ಯವು ಹೊಸಹೊಮ್ಮಿ ಹೃದಯಕ್ಕೆ ಹೋಗುವದು. ಜೀವನದ ಪ್ರತಿಬಿಂಬವನ್ನು ಮೂಡಿಸಬಲ್ಲ ಸಾಮರ್ಥ್ಯ ಸಾಹಿತ್ಯವ ಸಾಧನವಾಗಿದೆ. ಜೀವನಾನುಭವದಲ್ಲಿ ಬಂದ ಸಿಹಿ–ಕಹಿಗಳನ್ನು ಪೃಥಃಕರಿಸಿ ಸ್ವಾನುಭವದ ರಸಪಾಕವನ್ನು ನೀಡುವ ಮಹದ್ ಸಾಧನವು ಸಾಹಿತ್ಯದ ಜೀವಾಳವಾಗಿದೆ.

ಬಾಳರಂಗ ಭೂಮಿಯ ಮೇಲೆ ನಡೆದಿರುವ ಜೀವನ ನಾಟಕದ ಮೂಲ ಸೂತ್ರವು ದೇವರ ಕೈಯೊಳಗಿರುವಂತೆ ಸಮಾಜ, ಇಲ್ಲವೇ ಜೀವಿತಕ್ಕೆ ಸರಿಯಾದ ಮಾರ್ಗನಿರ್ಮಾಣ ಮಾಡುವದು ಸಾಹಿತಿಗೆ ಕರಗತವಾಗಿರಬೇಕು. ಇಂಥ ಗುರುತರವಾದ ಹೊಣೆಯನ್ನು ಹೊತ್ತು ಸಾಂಸ್ಕೃತಿಕ ಜೀವಣಿಗೆಗಾಗಿ ಅನವರತ ಹೆಣಗಾಡುವವನೇ ಸಾಹಿತಿಯು. ಹೀಗೆ ಸಾಹಿತ್ಯ ಮತ್ತು ವಿಜ್ಞಾನ ಸಂಪತ್ತಿಯನ್ನು ದೊರಕಿಸಿ, ಉತ್ತಮ ಕೃತಿಗಳನ್ನು ರಚಿಸಬಲ್ಲ ಪಂಡಿತರು, ವೈಜ್ಞಾನಿಕರು, ಸಾಹಿತಿಗಳು ಕನ್ನಡನಾಡಿನಲ್ಲಿದ್ದಾರೆ. ಅವರ ಫಲ ಜನತೆಗೆ ಸಿಗಬೇಕು. ಅಲ್ಲದೆ ಸಾಹಿತ್ಯದ ರಂಗ ಕಷ್ಟಸಾಧ್ಯವಾಗಿರುವದರಿಂದ ಸಾಹಿತಿಗಳಿಗೆ ಸಹಾಯಸಲ್ಲಿಸುವದು ಜನಸಾಮಾನ್ಯರ ಕರ್ತವ್ಯವಾಗಿದೆ.

ಇಂಥ ಸದುದ್ದೇಶದಿಂದ ನಾನು ಪ್ರತಿಭಾವಂತ ತರುಣ ಕವಿಗಳಾದ ಶ್ರೀ. ಮಹದೇವ ಬಣಕಾರರ ಪ್ರಸ್ತುತ ಪುಸ್ತಕವಾದ **"ಬಣ್ಣದ ಕಾರಂಜಿ"**ಯ ಪ್ರಕಾಶನದ ಹೊಣೆ ಹೊತ್ತುಕೊಂಡು ಪ್ರಕಾಶಿಸಿದ್ದೇನೆ. ಈಗಾಗಲೇ ಕನ್ನಡಿಗರೆದುರಿನಲ್ಲಿ ಅವರ "ಕಾವ್ಯೋದಯ"ವು ಹೊರಬಿದ್ದಿದೆ. ಈಗ ಇದು ಅವರ ಎರಡನೆಯ ಕೃತಿ, ಇವರ ಕಾವ್ಯದಲ್ಲಿ ಜೀವಂತ ಗತಿಯಿದೆ,

ಗಾಂಭೀರ್ಯವಿದೆ, ಹೇಳುವ ಮಾತಿನಲ್ಲಿ ಸ್ವಾನುಭವದ ಸಿದ್ಧಿ ಇದೆ ಎಂಬುದನ್ನು ಕನ್ನಡನಾಡಿನ ಹಿರಿಯ ಕವಿಗಳು ಅಭಿಪ್ರಾಯಪಟ್ಟಿದ್ದಾರೆ. ಅಲ್ಲದೇ ಅವರ ಅನೇಕ ಕವಿತೆಗಳು, ಕಥೆಗಳು ಜನಮೆಚ್ಚುಗೆಯನ್ನು ಪಡೆದಿವೆ. ಸಾಮಾನ್ಯ ವಿಷಯುವನ್ನು ಒಳ್ಳೆಯ ಮಾರ್ಮಿಕವಾಗಿ ಹೇಳುವುದೇ ಇವರ ಮೂಲಗುಣವಾಗಿದೆ ಎಂಬುದನ್ನು ಅವರ ಕೃತಿಗಳಿಂದ ಕಂಡುಕೊಳ್ಳ ಬಹುದಾಗಿದೆ. ಇವರು ಬರೆದ ಇನ್ನೂ ಕೆಲವು ಕೃತಿಗಳು ಹೊರಬೀಳಲಿವೆ. ಸಧ್ಯ ಪ್ರಕಟವಾಗಿರುವ "ಬಣ್ಣದ ಕಾರಂಜಿ"ಯ ಲಾಭವನ್ನು ಓದುಗರು ಪಡೆದುಕೊಳ್ಳಲಿ.

ಶಿವ ನಿವಾಸ,
ಹೊಸರಿತ್ತಿ
ಆಗಸ್ಟ ೧೫, ೧೯೫೩

—ರುದ್ರನ್ ಕೆ. ಹಳ್ಳಿಕೇರಿ.

# ಅತ್ತಿಗೆ ಶಾಂತಕ್ಕನವರಿಗೆ

# ಮುಡಿಪು

ಯಾರು ತನ್ನ ತವರ ಮರೆದು
ನಮ್ಮ ಮನೆಗೆ ಬಂದರೊ,
ಬರುವ ಮುನ್ನ ಯಶವ ಕೋರಿ
ಹೊಸತು ಬೆಳಕ ತಂದರೊ
ಯಾರು ಮಂಗಳಾರತಿಯನು
ನಮಗೆ ಬೆಳಗುತಿರುವರೊ
ಯಾರು ಮಮತೆ, ಸಮತೆಯನ್ನು
ನಿತ್ಯ ನೀಡುತಿರುವರೊ
ಯಾರು ಬಾಳಿನೇಳ್ಗೆಗಾಗಿ
ಸದಾ ಶ್ರಮಿಸುತಿರುವರೊ
ಯಾರು ನಮ್ಮ ಉದಯಕಾಗಿ
ಇಂದು ಉದಿಸಿ ಬಂದರೊ
ಅಂಥ ನನ್ನ ಆತ್ಮಬಂಧು
ಅವಳೆ ನನ್ನ ಅತ್ತಿಗೆ,
ಇದೋ ಅವಳ ನೆನಹಿಗಾಗಿ
ಮುಡಿಪು ಕಿರಿಯ ಹೊತ್ತಿಗೆ

— ಮಹದೇವಣ್ಣ.

# ಕವನಾನುಕ್ರಮಣಿಕೆ



# ನನ್ನ ನಿನ್ನ ನೋಟದಲ್ಲಿ

ನನ್ನ ನಿನ್ನ ಕಣ್ಣಿನಲ್ಲಿ,
ನೇಹ ನೋಟ ಚಿಮ್ಮುವಲ್ಲಿ,
ಬಣ್ಣಬಣ್ಣವಾಂತ ಲೋಕ ಮೂಡುತಿದ್ದವು.
ನಾಕ ಲೋಕ ಮೂಡಿ ನಿಂದು,
ಅಮರಗಾನ ಹರಿಯುವಂದು,
ಪ್ರೇಮರಾಗದಿಂದ ಎದೆಗಳಲೆಯುತಿದ್ದವು !

ಬಾಳ ಭಾರವನ್ನು ಮರೆತು,
ಭಾವದತುಲ ರಸದಿ ಬೆರೆತು,
ವಿಮಲ ಜಲದೊಳೆಮ್ಮ ನೌಕೆ ಸಾಗುತಿದ್ದಿತು.
ನನ್ನ ಜೀವ ನಿನ್ನದಾಗಿ,
ನಿನ್ನ ಜೀವ ನನ್ನದಾಗಿ,
ಒಂದೆ ದೇಹದುಭಯಪಕ್ಷಿಯಾಗಿ ಮೆರೆದಿತು !

ಉದಯಭಾನು ಬರುವ ಮುನ್ನ
ಉದಿಪ ಅರುಣನಂತೆ ನಿನ್ನ
ಕಿರಣದಿಂದ ಪ್ರೇಮ ಬೆಳಕು ತುಂಬಿಕೊಂಡಿತು.

ಸತ್ಯವೆಂಬುವಲ್ಲಿ ಬೆರೆತು,
ಮಿಥ್ಯವಿಲ್ಲವೆಂದು ಕಲೆತು,
ನಿಜಕು ನಾನು ಅಮರನೆಂದು ಎದೆಯು ಕೂಗಿತು !

ನನ್ನ ನಿನ್ನ ನೋಟದಲ್ಲಿ
ನೈಜ ಬೆಳಕು ಹರಿಯುವಲ್ಲಿ
ಸಗ್ಗವಿಳೆಗೆ ಬಂದು ಸೊಗವ ಸೂಸುತಿದ್ದಿತು.

ದೂರದಿಂದ ತೂರಿ ಬಂದು,
ಆರದಾರತಿಯನು ತಂದು,
ಬೆಳಗಿ ನಿನ್ನ ಮನವು ನನಗೆ ಮುಕ್ತನಿತ್ತಿತು !

# ನಾವು- ಇಂದಿರೆ

ಮನದೊಳೇನೋ ಎಣಿಕೆ ಹಾಕುತ
ಮಲಗೆ, ಕನಸಿದು ಸಂದಿರೆ,
ನಾನೆ ತಿಳಿಯದೆ ನನ್ನೊಳಡಗುತ
ಬಂದು ನಿಂದಳು ಇಂದಿರೆ !

ಭಾವಯೋಗದ ತಪವ ಗೈಯುತ
ಆತ್ಮಲೋಕದಿ ಕುಳಿತಿರೆ,
ಮಂಗಳಾರತಿ ಬೆಳಗುತಂಗನೆ
ರಾಗರಸದಿಂ ಬೆರೆತಿರೆ,

ಯುಗಯುಗಾಂತದಿ ಬೀಡುಬಿಟ್ಟಾ
ಕತ್ತಲೆಯು ಕವಲೊಡೆಯಿತು.
ನೋಡುನೋಡುತಲಂತೆ ಕುಳಿತಿರೆ
ಹಾಲಿನಾ ಹೊಳೆ ಹರಿಯಿತು !

ತುಂಬಿದಿಂದಿರ ಬಿಂಬಕಾಂತಿಯು
ತೋಟ ನಂದನವಾಗಿರೆ,
ಮಧುರ ಮಿಲನದ ಮಧುವನೀಂಟುತ
ಚಿಚ್ಚಕೋರವು ಮೆರೆದಿರೆ;

ಬಾನಬಟ್ಟೆಯೊಳೆಲ್ಲು ಮೊರೆಯಿತು
ಪ್ರೇಮಗೀತೆಯು ಸಾರವು;
ಹೇಳತೀರದ ಹರ್ಷದುತ್ಸವ
ಕಂಡಲೋಕವಪಾರವು !

ನಾನು—ಇಂದಿರೆ ಅಂತೆ ನಡೆದಿರೆ,
ಅಮಿತ ಸುಖ ಹೊರಸೂಸಿರೆ,
ಹಬ್ಬಿಕೊಂಡಾ ಜೀವಜ್ಯೋತ್ಸ್ನೆಯು
ಮನದ ಮಬ್ಬನು ದೂರಿರೆ !

ಎಂದು ಕಾಣದುದೆನ್ನೆ ಕಾಣುತ
ಇಂಧಿರನ ರಸ ಕುಡಿಯುತ,
ಮಂದಗಮನದೊಳೆಂದು ಮೆರೆಯುತ
ಸಂದ ಸುಖವನೆ ಸುರಿಯುತ.

ಒಲವು, ನಲವಿನ ರೆಕ್ಕೆ ಬಡಿಯುತ
ಪ್ರೇಮಪೂಜೆಯ ಗೈಯುತ
ನಾನು—ಇಂದಿರೆ ಬಾನೊಳೇರಿರೆ
ಅಧರದಮೃತವ ಹೀರುತ !

ಮತ್ತೆ ಭೂತಲಕಿಳಿಯುದಂತೆಯೆ
ಬೆಳಕಿನೊಳು ಬೆಳಕಾದೆವು;
ಈರ್ವರೊಂದೆದೆ ಪಡೆದ ಸಮಯದಿ
ಜೇನು—ಜೊನ್ನಗಳಾದೆವು.

ಮನದೊಳೇನೋ ಎಣಿಕೆ ಹಾಕುತ
ಮಲಗೆ, ಕನಸದು ಸಂದಿರೆ,
ನಾನೆ ತಿಳಿಯದೆ ನನ್ನೊಳಡಗುತ
ಬಂದು ನಿಂದಳು ಇಂದಿರೆ !

---

# ನಮ್ಮ ಪ್ರಣಯ ?

ನಿಮ್ಮ ಪಾದಪದ್ಮದಲದಿ,
ಹರಿವ ಪರಮ ಪುಣ್ಯಜಲದ,
ಮಿಂದು ಶುಚಿಭೂತದಿ;

ರಸವಿಪಾಕದೆಡೆಯನಿಟ್ಟು,
ನಿಮ್ಮ ಸೊಬಗನೆಲ್ಲ ಉಟ್ಟು,
ಪೂಜೆ ಗೈವೆ ಪದುಳದಿ !

ಚಿದ್ವಿಭೂತಿ ಬೆಳಗಲಿನಿಯ
ಪ್ರೇಮ ಕಾಣದಿರಲಿ ಕೊನೆಯ,
ಮನ್ಮನೋವಿಲಾಸದಿ !

ಪೂರ್ಣಕಲೆಯ ಚಂದ್ರನುದಯ
ನಾಚುವಂತೆ ನಮ್ಮ ಪ್ರಣಯ
ಅಮರಗೀತ ಗಾನದಿ !

# ಅಂದರಂತೆ.......!

ನನಗಿಂತಲೂ ನೀನು ಬಹು ಚಲುವೆಯಂತೆ
ನಿಮ್ಮೂರಿನೊಳು ಜನರು ಅಂದರಂತೆ !

ನಿನ್ನಂದ ಚಂದಗಳು
ನನಗಿಲ್ಲವಂತೆ
ನಿನ್ನ ಈ ಮೈಬಣ್ಣ
ಲಿಂಬಿಹಣ್ಣಂತೆ !

ನಿನ್ನ ತೆಳುಮೈ ಎನಗೆ
ಸರಿ ಇಲ್ಲವಂತೆ,
ನಿನ್ನ ನಗೆ ನಲ್ಮುಗುಳು
ನನಗಿಲ್ಲವಂತೆ !

ನನ್ನ ನಿಲುವಿಕೆ ನಿಜಕು
ಚಲುವಿಲ್ಲವಂತೆ,
ನಿನ್ನ ಊರೊಳು ನೀನೆ
ತುಂಬುತೇರಂತೆ !

ನಿನ್ನ ನೋಡಲು ಮೊದಲು
ಬಂದಾಗಿದಂತೆ,
ನಿಮ್ಮ ಊರಿನ ಜನರು
ಇಂತಂದರಂತೆ !

ನನಗಿಂತಲೂ ನೀನು ಬಹು ಚಲುವೆಯಂತೆ
ನಿಮ್ಮೂರಿನೊಳು ಜನರು ಅಂದರಂತೆ !

# ಸಾಯುದಿಹಳು ಮೊದಲ ಮಡದಿ

"ಮತ್ತೆ ಮದುವೆಯಾಗು" ಎಂದು
ಬೋಧಮಾಡುತಿರುವರು.
ಅವಳು ಸತ್ತರಾದುದೇನು ?
ಕನ್ಯೆ ಕೊಡುವರೆನುವರು.

"ಹೀಗೆ ಹಟವ ಹಿಡಿವರೇನು
ಒಳ್ಳೆನೆನ್ನಬಾರದು,
ಹಿರಿಯರೆಂದ ಮಾತ ನಡೆಸಿ
ಏಕೆ ಒಪ್ಪಬಾರದು ?"

"ಇನ್ನು ಮದುವೆ ಎನಗೆ ಮರಣ"
ಎನಲು ಬೈಯುತಿರುವರು.
"ಸಾಯುದಿಹಳು ಮೊದಲ ಮಡದಿ"
ಎನಲು ಹುಚ್ಚನೆನುವರು !

ಬಾಹ್ಯಕಿಲ್ಲವಾದರೇನು ?
ಆತ್ಮದಲ್ಲಿ ಇರುವಳು
ಅವಳ ನೆನಹು ತುಂಬಿಕೊಳಲು
ಪ್ರೇಮಪೂಜೆ ಗೈವಳು !

ಎಲ್ಲಿ ಅಲೆಯುತಿರುವೆನಲ್ಲಿ
ಮೂಡಿ ನಿಲ್ಲುತಿರುವಳು
ನನಗೆ ಕಷ್ಟನಷ್ಟವಾಗ-
ದಂತೆ ನೋಡಿಕೊಳುವಳು !

ನನ್ನ ಉಸಿರೊಳವಳ ಉಸಿರು
ಒಂದುಗೂಡಿ ಬರುವದು
" ನಾನೆ ಅವಳು, ಅವಳೆ ನಾನು "
ಎಂಬ ಭಾವವಿರುವದು !

ನಿತ್ಯ ಅವಳು ಧರ್ಮ ರಕ್ಷೆ-
ಯಾಗಿ ಕಾಯುತಿರುವಳು,
ನನ್ನ ಬಳಿಯನುಳಿಯದಂತೆ
ಸನಿಹ ಸುಳಿಯುತಿರುವಳು !

ಎನ್ನಲೆಲ್ಲರೊಂದುಗೂಡಿ
ಹುಚ್ಚು ಹಿಡಿಯಿತೆನುವರು.
" ಮತ್ತೆ ಮದುವೆಯಾಗು "-ಎಂದು
ಬೋಧಮಾಡುತಿರುವರು !

# ಹೊಸದಾಗಿ ಬಂದಾಗ....?

ನಿಮ್ಮ ಮನೆಯಂಗಳದಿ ಅಂದು ನಾ ನಿಂದಾಗ
ಎದೆಗುದಿಯು ಬೇಗುದಿಯು ಹೆಚ್ಚಿದ್ದಿತು.
"ಇದು ನನ್ನ ಮನೆ" ಎಂಬ ಕಲ್ಪನೆಯು ಬಂದಾಗ
ಸುತ್ತೆಲ್ಲ ಕುಡಿನೋಟ ಸೂಸಿದ್ದಿತು !

ಇವರೆಂತೊ ಏನೆಂಬ ಭಾವನೆಯು ಬಂದಾಗ
ಮನವೆಲ್ಲ ಕಂಪನದೊಳಲುಗಿದ್ದಿತು.
ನನ್ನ ಹೃದಯದ ದೇವಮಂದಿರವಿದೆಂದಾಗ
ಭಕ್ತಿಜಲ ತುಂಬಿ ತುಳುಕಾಡಿದ್ದಿತು !

ಆ ನನ್ನ ತವರೂರ, ಆ ನನ್ನ ಸಿರಿಯೂರ
ಚಿತ್ರ, ಚಿತ್ತದ ಭಿತ್ತಿಯೊಳು ಮೂಡಿರೆ,
ಎದೆ ಎಲ್ಲ ಕರಕರಗಿ ಕಂಬನಿಯ ರೂಪದಲಿ
ಮಿಡಿಮಿಡಿದು ಹೊರಹೊರಗೆ ಸೂಸುತ್ತಿರೆ;

ನಾ ನಿಮ್ಮ ಮನೆಯಲ್ಲಿ ನಿಂದಿರ್ದರೂ ಅಂದು
ಮನವೆಲ್ಲ ತವರೂರ ಸೇರಿದ್ದಿತು.
ಇವರೆಂತೊ ಏನೆಂಬ ವಿಭ್ರಮಣೆಯೊಳು ಸಿಲುಕಿ
ತಲೆ ಭಾರವಾಗಿ ಕೆಳ ಬಾಗಿದ್ದಿತು !

ಒಂದೊಂದೆ ಬಿಸಿಯುಸಿರು ಎದೆಯ ಮೇಲುರುಳುರುಳಿ
ಬೆಂಗಾಳಿಯಂತೆ ಹೊರ ಬೀಸಿದ್ದವು;
ನಾ ಬಂದು ನಿಂದಿರಲು, ತಾಸೆರಡು ಸಂದಿದರು
ಎಲ್ಲವೂ ಶೂನ್ಯವನು ಧರಿಸಿದ್ದವು !

ಕೊನೆಗೊಮ್ಮೆ ತಿಳಿಗೊಳದ ತಂಗಾಳಿ ತೀಡಿದೊಲು
·ನನ್ನೆದೆಗೆ ತಂಪೆರಚಿಕೊಂಡಿದ್ದಿತು.
ಹೃತ್ಕಮಲವರಳರಳಿ ಸೌರಭವ ಸೂಸಿತ್ತು
ಸಗ್ಗವಿಳೆಗೈತಂದು ಸೊಗವಿಟ್ಟಿತು !

ಕಂಡೆ ನಾನಾಗಲ್ಲಿ ನಿಮ್ಮುದಯದಂದವನು
ನೀವಂದು ದಿನದೊಡೆಯರಾಗಿದ್ದಿರಿ;
ನಿಮ್ಮ ನಗೆ ಹೊಂಬೆಳಕು ನನ್ನೆದೆಯನಾವರಿಸಿ,
ನನ್ನ ಹೃದಯವ ಕದ್ದುಕೊಂಡಿದ್ದಿರಿ !

ನಿಮ್ಮ ನಾ ಕಂಡಾಗ ಮರೆದಿತ್ತು ತವರೂರು
ಇಳಿದಿತ್ತು ನನ್ನೆಲ್ಲ ಎದೆಭಾರವು;
ಹೊಸದಾಗಿ ಬಂದಾಗ ನಾನಂದು ನಿಂದಾಗ
ಎದೆಗುದಿಯು ಬೇಗುದಿಯು ಹೆಚ್ಚಿದ್ದಿತು.
ನಿಮ್ಮನ್ನು ಕಂಡಾಗ, ನಿಮ್ಮೊಡನೆ ಕಲೆದಾಗ
ನಾನಿರುವ ಇಳೆ ಎನಗೆ ಮರೆತಿದ್ದಿತು.

# ಆತ್ಮ ಲೀನವಾಗಲಿ !

ದೇವನಿತ್ತ ವರಪ್ರಸಾದ
ನನ್ನ ನಿನ್ನ ಸಂಗವು,
ಆವನಿಗಾಗಿ ಪೂಜೆಗೊಳಲಿ
ನಿರುತ ನಮ್ಮ ಪ್ರೇಮವು !
ಜೀವ ಜಮುನೆ ತುಂಬಿ ತುಳುಕಿ,
ನಲಿಯುತಿರಲಿ ಬಾಳು ಬಳುಕಿ;
ಅಧರದಮೃತ ಪಾನದಿ !

ಮನವು ಬೆಸುಗೆಗೊಳ್ಳುವಲ್ಲಿ
ಯೋಗನಿದ್ರೆಯಾಗಲಿ,
ಆತ್ಮದುನ್ನತಿಯನು ಬಯಸಿ,
ನಮ್ಮ ಬಾಳು ಸಾಗಲಿ !
ಎಡರುವಡರುಗಳನು ನುಂಗಿ
ಮೂರ್ತಿಗೊಳಲಿ ಪ್ರೇಮಭಂಗಿ
ನನ್ನ ನಿನ್ನ ಲಾಸ್ಯದಿ !

ಘೋರ ದುಃಖವೆಲ್ಲ ಕರಗ-
ಲೆಮ್ಮ ಜೀವ ಮುಸಿಯಲಿ;
ಕಾಮವೆನುವುದೆಲ್ಲ ಸುಟ್ಟು
ಬರಿಯ ಪ್ರೇಮ ಉಳಿಯಲಿ.
ನೀನೆ ಹೃದಯದೇವಿಯಾಗಿ
ದೇವನೆದುರು ಬಾಗಿ, ತೂಗಿ,
ನಿಲ್ಲು ನಲ್ಮೆ ಭಾವದಿ !

ತಪದ ಸಿದ್ಧಿಯನ್ನು ಪಡೆದು
ಈರ್ವರೆದೆಗಳರಳಲಿ;
ತುಟಿಗೆ ತುಟಿಯು ಸಂದಿಸಿರಲು
ಮಧುರ ಮಧುವು ಸೂಸಲಿ !
ಪಾಪರಹಿತ ಜಗವಸಾರಿ,
ಶಾಂತಿಶರಧಿಯನ್ನು ಸೇರಿ;
ಆತ್ಮ ಲೀನವಾಗಲಿ !

# ಕೆನ್ನೆ ಕೆಂದಳಿರಿನಲ್ಲಿ

ಕೆನ್ನೆ ಕೆಂದಳಿರಿನಲಿ, ಕೆಂಜೊಡರ ಮಾಲೆಗಳು
ಕಂಪಿನಾರತಿ ಎತ್ತಿ ಬೆಳಗುತಿಹವು;
ನಗೆಯು ನಲ್ಮುಗುಳಮಲ ಭಾವದಾಲಿಂಗನಕೆ
ನಿರ್ಮಲಾಂತಃಕರುಣ ತೋರುತಿಹವು !
ಹೂಬೆಳಕು, ಹೊಂಬೆಳಕು, ಚೆಂಬೆಳಕು, ಚಲ್ವಾಂತು
ಚೆಂದುಟಿಯು ಚುಂಬನವ ಸಾರುತಿಹವು,
ಅರೆಚಿರಿದ ಹೂಗೆನ್ನೆಗಳ ಇಂಪ ಸಾರಲಿಕೆ
ನೋಡದೋ ಭೃಂಗಾಳಿ ಬೀಸುತಿಹವು !
ನಿನ್ನೆದೆಯು ಕಮಲದೊಳಗಿಹ ಪ್ರೇಮಮಕರಂದ
ಉಕ್ಕುತಿಹುದಕ್ಕರತೆಯಾಳದಲ್ಲಿ
ತುಂಬುಜೌವನದಲ್ಲಿ ತುಂಬಿರುವ ರಸಕಾಗಿ
ತುಂಬಿಯಾಗಿಡೆ ಎನ್ನ ಪ್ರೇಮವಿಲ್ಲಿ !
ಬೆಡಗಿನ್ನೈಸಿರಿಯಲ್ಲಿ ಉನ್ಮತ್ತೆಯಾಗಿರುವೆ
ಓ ! ತರಳೆ ತಾರುಣ್ಯದುದಯದಲ್ಲಿ
ಸೆರೆಹಿಡಿವೆ ನೀನನಿಶ ನನ್ನೆದೆಯು ಪ್ರೇಮವನು
ನಿನ್ನೊಳಿಹ ಕೆನ್ನೆ, ಕೆಂದಳಿರಿನಲ್ಲಿ !

# ಇನಿಯನಲ್ಲಿ ಭಿಕ್ಷೆ!

ಇಂದೊಂದು ದಿನವಿದ್ದು ನಾಳೆ ಹೋಗುವಿರಂತೆ
ನಾಳೆ ಎಂಬುವದೇನು ದೂರವಿಲ್ಲ,
ಎಂದು ಬಂದರು ಎರಡು ದಿನವಿಲ್ಲಿ ನೀವಿಲ್ಲ
ಬಂದ ಮಾರನೆ ದಿನವೆ ನಡೆವಿರಲ್ಲ !

ಏಕೆ ಏಕಾಂತದೊಳಗೇನು ಸಂಭವಿಸಿದುದು
ಎನ್ನ ಮೇಲಿರುತಿಹುದೆ ನಿಮ್ಮ ಮುನಿಸು
ನಿಮ್ಮನುಳಿದರೆಚಣಕೆ ಒಡಲಿನಾಳಕೆ ಬೆಂಕಿ,
ಅಗಲದಿರಿರೆನ್ನುತಿದೆ ಎನ್ನ ಮನಸು !

ಎನ್ನ ಕಂಗಳ ಜ್ಯೋತಿ, ಸನ್ಮೋದಗಳ ಮೂರ್ತಿ
ಅಯ್ಯೋ ! ನೀವಿಲ್ಲದರೆ ಎನ್ನದೇನು ?
ಸತ್ಯ ಪ್ರೀತಿಯು ಸದಭಿಮಾನ ಸನ್ಮಂಗಳದಿ
ಮೂಡಿದಿಂದಿರ ನೀವು ಅಲ್ಲವೇನು ?

ಹಬ್ಬಿಕೊಂಡಿಹುದಿಂದು ನಮ್ಮೆದೆಯ ಆಗಸದಿ
ಬೆಳುದಿಂಗಳಾನಂದ ಮಧುರವಾಗಿ;
ಮಾತು ಮಾತಿನ ಮುತ್ತು, ಮುತ್ತನಿತ್ತುತಲಿಹವು
ಮೋಹಮೋದದಿ ಮುಗ್ಧತನವ ನೀಗಿ.

ಮರೆತು ಹೋಗಿದೆ ಬಾಳ ಸಾವುನೋವಿನ ಸಂತೆ
ಬೆರೆತು ಹೋಗಿದೆ ಜೀವ ಜೀವದಲ್ಲಿ;
ಇರುವೆರಡು ದಿವಸಗಳು ರಸನಿಮಿಷವಾಗಿರಲಿ
ಎನ್ನಿನಿಯ ಮಿಲನದೀ ಸಾರದಲ್ಲಿ !

# ನಗು, ಎನ್ನ ನಲ್ಲೆ !

ನಗು ನಗುವ ಮೊಗದಂದವೆಲ್ಲಡಗಿ ಕುಳಿತಿಹುದು
    ನಗುವೆ ಬಾಳಿನ ಗೆಲುವು ನಗು, ಎನ್ನ ನಲ್ಲೆ !
ನಗದ ನಿಮಿಷದ ನರಕಯಾತನೆಯು ನಾನೊಲ್ಲೆ
    ನನ್ನ ರಾಜ್ಯದ ಶೂನ್ಯಕಿಲ್ಲ ಎಲ್ಲೆ !
    ಏಕೆ ಸುರಸುಂದರಿಯೊ,
    ಮಾನಸಿಕ ಮಾಧುರಿಯೊ,
ಮುಳಿಸಿಕೊಂಡಿಹೆ ಏಕೆ ಹೇಳೆನ್ನ ನಲ್ಲೆ ?
ತಡಗೈದರೆದೆಗೆಲ್ಲ ಪ್ರಜ್ವಲಿಪ ಜ್ವಾಲೆ !
ನಗುವೆ ಬಾಳಿನ ಗೆಲುವು ನಗು, ಎನ್ನ ನಲ್ಲೆ !

# ಮಧುರ ಮಿಲನ

ನನಗೆ ನಾನೆ ಅಳಿಯುದಂತೆ
ದೇಹ, ದೇಹಕೆಳೆಸದಂತೆ
ಜೀವ ಭಾವ ಮೊಳೆಯುದಂತೆ
ಇಂದು ಕೂಡಿ ಬಂದಿತಲ್ತೆ,
ನಮ್ಮ ಮಧುರ ಮಿಲನವು !

ಮೃದುಲವಾಗಿ ಕೂಡಿಕೊಂಡು
ಮಧುರತಮವೆ ಹೊಂದಿಕೊಂಡು
ದಿವ್ಯವಾದ ಕನಸ ಕಂಡು
ಮಳೆಯಃವಿಲ್ಲಿನಂತೆ ಮೂಡಿ
ಕೂಡಿತಲ್ತೆ ಪ್ರೇಮವು !

ಪಾರವಿರದ ಕಡಲಿನಂತೆ
ಪಾರುಗಾಣ್ದಾ ಗಗನದಂತೆ
ದೂರ ನಗುವ ಬೆಳಕಿನಂತೆ
ಪೂರ್ಣಚಂದ್ರನುದಯುದಂತೆ,
ನಮ್ಮ ಪ್ರೇಮದುದಯವು !

ರಸದ ಹೊನಲಿನಲ್ಲಿ ಮಿಂದು
ಮಧುರ ಮಧುರನೀಂಟಲೆಂದು
ಜೀವ, ಜೀವವಪ್ಪಿಕೊಂಡು
ಒಂದುಗೂಡಿ ತೂಗಿತಲ್ತೆ
ನಮ್ಮ ಬಾಳಯೋಗವು !

" ಅಹುದು ಎನ್ನ ಜೀವದುಸಿರೆ ನಿನ್ನ
ಮನವು ನನ್ನದು.
ನನ್ನ ಧರ್ಮರಕ್ಷೆಯಾಗಿ ನಿನ್ನ
ಚರಿತೆ ಕಾವುದು ! "

" ಕೇಳಿರೆನ್ನದೊಂದು ಮೊರೆಯ ನೀವು
ನನ್ನ ಮರೆವಿರಾ ?
ಪ್ರೇಮದಿಂದ ಕರೆಯುವಾಗ ನನ್ನ
ಹೆಸರ ಬಿಡುವಿರಾ ? "

" ಇಲ್ಲ ' ಪ್ರೇಮ ' ಮರೆವೆನೇನೆ ನೀನು,
ನನ್ನ ಕಂಗಳು;
ನಾನು–ನೀನು ಅಂದರೇನು ? ದೇಹ-
ದೆರಡು ಕೈಗಳು !

ಸಾಗಬಹುದೆ ಬಾಳನೌಕೆ ನಿನ್ನ-
ನುಳಿದು ಸಾಗನು,
ಮರೆತು ಬಾಳಬಹುದೆ ನೀನೆ ಹೇಳು–
ನನ್ನ ಎದೆಯನು ? "

# ನನ್ನಪರಾಧ !

ಮನ್ನಿಸು ನನ್ನಪರಾಧವ ನಲ್ಲೆ
ಇಂದೇಕೋ ತಡವಾಗಿಹುದು.
ನನಗಾಗಿಯೆ ನೀ ಕಾದಿಹೆ ಬಲ್ಲೆ
ತಾಳಿಕೊ ತಾಳ್ಮೆಗೆ ಬೆಲೆ ಇಹುದು !

ಮನದೊಳಗುದ್ವಿಗ್ನತೆ ತುಂಬಿರುವದು
ಹೇಳಲಿಕಸದಳ ರೂಪಸಿಯೆ;
ಅಯ್ಯೋ ! ಕಾಲವ ಕೊಲೆಗೈದೆನು ನಾ
ನೈರಾಶ್ಯದಿ ಓ ! ಪ್ರೇಯಸಿಯೆ !

ಬಂದೆನು, ಬಂದೆನು ಓ ! ನಾ ನಿನ್ನೆಡೆ
ತಡವಂ ಗೈಯೆನು ನಾನಿನ್ನು;
ಮನ್ನಿಸು ನನ್ನಪರಾಧವ ನಲ್ಲೆ
ಇಂದೇಕೋ ತಡಗೈದಿಹೆನು !

# ನನ್ನ ರಾಧೆ !

ನನ್ನ ಮೋಹಿಸಲೆಂದು ಮೋಹಿಸುವ ಚನ್ನೆ
ನನ್ನ ರಾಧೆಯು ನಿನಗೆ ಕಡಿಮೆ ಇಹಳೆನ್ನೆ !

ನಿನ್ನಂತೆಯೇ ಅವಳು
ಮಾಧುರಿಯು ಅಹುದು,
ನಿನ್ನಂತೆಯೇ ಅವಳು
ರೂಪಸಿಯು ಅಹುದು.
ನಿನಗಿಂತಲೂ ಮೇಲು
ಅವಳಿಗಿಹ ರಂಗ;
ನಿನಗಿಂತಲೂ ಮಧುರ
ಅವಳಂತರಂಗ !
ನೀನು ಚಂಚಲೆಯಹುದು
ಅವಳು ನಿಶ್ಚಲತೆ;
ಕೇಳು, ಓ ! ಆ ರಾಧೆ
ಪ್ರೇಮಸಂಜಾತೆ
ಇಲ್ಲ ಅವಳನ್ನುಳಿದು
ಅನ್ಯದೆಡೆ ಪ್ರೇಮ;
ಎಲ್ಲಿ ಕಣ್ಣಿಡಲಲ್ಲಿ
ಕಾಣುವದು ಕಾಮ !

ನನ್ನ ಮೋಹಿಸಲೆಂದು ಮೋಹಿಸುವ ಚನ್ನೆ
ನನ್ನ ರಾಧೆಯು ನಿನಗೆ ಕಡಿಮೆ ಇಹಳೆನ್ನೆ !

# ಹೆಸರು ಮಾತ್ರ ನನ್ನದು

ನಾ ನಿಮಿತ್ತಮಾತ್ರನಲ್ತೆ
ನೀನೆ ಸರ್ವ ಚೇತನ
ನನ್ನ ನಿನ್ನ ಮಿಲನವಾಗೆ
ಆತ್ಮಕಮೃತ ಸೇಚನ !
(ವಿರಹದಿಂದ ವೇದನ)

ಬಾಹ್ಯದಲ್ಲಿ ಬೆಳಗುತಿರುವ
ಬೆಳಕು ಮಾತ್ರ ನನ್ನದು;
ಬೆಳಕಿಗಾತ್ಮ ಕೊಟ್ಟ ಬತ್ತಿ,
ತೈಲವೆಲ್ಲ ನಿನ್ನದು.
(ಹೆಸರು ಮಾತ್ರ ನನ್ನದು !)

ನಾನು ಬೆಳೆಯು—ನೀನು ಬೇರು
ಪ್ರೇಮ ಮಳೆಯುಗರೆಯಲು,
ಬೆಳೆವ ಪೈರಿಗಿರುವ ಫಲವು
ಸಂದಿತೀರ್ವರೊಲಿಯಲು !

ನಾನು ವೀಣೆ—ನೀನು ತಂತಿ
ಇನಿದು ಮತ್ತೆ ಯಾರದು ?
ಯಾರು ಪೆನೆ ಅಂದರೇನು
ರಾಗದೋಜೆ ನಿನ್ನದು !

**ಕೂಡಿಕೊಳ್ಳುವನಿತರಲ್ಲಿ**
**ಕಂಡ ಕನಸಿನಾಳದಲ್ಲಿ,**
**ನಿಂದ ಮೂರು ಲೋಕದಲ್ಲಿ;**
**ಎದೆಯೊಳವಿತ ಒಲವಿನೊಸಗೆ**
ಅಂದು ಅರಳುತಿದ್ದಿತು !

ನಾನು—ನೀನು ಒಂದೆಯಾಗಿ
ಭುವನದಿಂದ ಬೇರೆಯಾಗಿ
ಪ್ರೇಮಮಂಚದಲ್ಲಿ ತೂಗಿ
ನಲಿದು, ಒಲಿದು ನೃತ್ಯವಾಡಿ
—ಮಧುರ ಮಿಲನವಾಯಿತು !

# ಚಣ—ಯುಗ

ಒಂದು ಚಣ—ಒಂದು ಯುಗ
ನಿನ್ನನುಳಿದ ಹೊತ್ತು;
ಒಂದೆ ಮುತ್ತು—ಸೊದೆಯ ತುತ್ತು
ಸಗ್ಗ ಸುತ್ತುಮುತ್ತು !

# ಕಾಮಕ್ಕೆ ಬಂದಿಲ್ಲ

ಕಾಮಕ್ಕೆ ಬಂದಿಲ್ಲ,
ಪ್ರೇಮಕ್ಕೆ ಒಂದಲ್ಲ;
ಬಂದಿರುವೆ ನಿಂದಿರಲು ಸಂಗಾತಿಯಾಗಿ !
ಮೋಹಕ್ಕೆ ನೀನಲ್ಲ
ಮೋದಕ್ಕೆ ನೀನಲ್ಲ
ಈ ಬಾಳನಾಳವನು ಸೇರುವುದಕಾಗಿ !
ಬಂದದ್ದಕೆದೆಗೊಟ್ಟು,
ಮುನ್ನುಗ್ಗಿ ಅಡಿ ಇಟ್ಟು
ನನ್ನಂತೆ ನೀ ಬಾಳ ನೂಕುವುದಕಾಗಿ !
ಸುಖವಿರಲಿ, ಇರದಿರಲಿ
ಕಷ್ಟದಾ ಕಣೆ ಇರಲಿ
ಸಂಕಷ್ಟಗಳ ಸಹಿಸು ಸಹಭಾಗಿಯಾಗಿ !
ಬೆಳಕಿರಲಿ, ಇರದಿರಲಿ,
ಕಾವಳದ ಭಯವಿರಲಿ;
ಕಾಲಪುರುಷನೆ ಬರಲಿ ಅಡ್ಡಿಯಾಗಿ !
ಇಡು ನಿನ್ನ ಕೆಚ್ಚನ್ನು,
ಇಡು ನಿನ್ನ ನೆಚ್ಚನ್ನು;
ಬಿಡು ನಿನ್ನ ಪ್ರಾಣವನು ಬಾಳಿಗಾಗಿ !
ಕಾಮಕ್ಕೆ ಬಂದಿಲ್ಲ,
ಪ್ರೇಮಕ್ಕೆ ಒಂದಲ್ಲ;
ಬಂದಿರುವೆ ನಿಂದಿರಲು ಸಂಗಾತಿಯಾಗಿ !

# ನಾನು—ನೀನು

" ಬಲ್ಲಿರೇನು ನೀವು ಇಲ್ಲದಾಗ
ನನ್ನ ಗೋಳನು,
ಹೇಳತೀರದಾಗ ವಿರಹ, ತಾಪ
ಅದನು ತಾಳೆನು ! "

" ನೀನು ಎಂತೊ ಅಂತೆ ನಾನು, ನಿನ್ನ
ನಿರುತ ಬಯಸುವೆ,
ನಿನ್ನನುಳಿದು ದೂರದಲ್ಲಿ ಇರಲು
ಕನಸ ಕಾಣುವೆ ! "

" ಸುಳ್ಳುಸುಳ್ಳು ನಿಜಕು ಸುಳ್ಳು
ನೆವಕೆ ನುಡಿಯುತಿರುವಿರಿ.
ಎದುರು ಮಾತನಾಡಿ, ನಕ್ಕು, ನಗಿಸಿ
ಹೊರಗೆ ನಡೆವಿರಿ ! "

" ಕೇಳು ಹುಸಿಯ ನುಡಿಯಬಹುದೆ
ನನ್ನ ದೇವಿ ಎದುರಿಗೆ ?
ಮರುಳು ಮಾತನಾಡಬಹುದೆ ಹೇಳು
ಮನದ ದೇವಿಗೆ ? "

" ಅಹುದು ಕೇಳಿ ಪ್ರಾಣದೊಡೆಯ ನೀವೆ
ನನ್ನ ದೇವರು;
ನನ್ನ ಇರುವು ನಿಮ್ಮದೆಂದು ನೀವೆ
ನನ್ನ ಕಾವರು ! "

ನಾ ನಿಮಿತ್ತಮಾತ್ರನಲ್ತೆ
ನೀನೆ ಸರ್ವ ಚೇತನ,
ನನ್ನ ನಿನ್ನ ಮಿಲನವಾಗೆ
ಆತ್ಮಕಮೃತ ಸೇಚನ.
(ವಿರಹದಿಂದ ವೇದನ !)
ದೇವಸಾಕ್ಷಿ, ಆತ್ಮಸಾಕ್ಷಿ
ಇರುವುದೆಲ್ಲ ನಿನ್ನದು.
(ಹೆಸರು ಮಾತ್ರ ನನ್ನದು !)

# ಬಾಳು ಬೆಳಗಲಿ !

ರೂಪುಗೊಳ್ಳಲಿಹುದು ಇನ್ನು ನಮ್ಮ ದೈವರೇಷೆಯು
ಉದಯರವಿಯ ಉದಯದಂತೆ ಉದಿಸಲಿಹುದು ಆಶೆಯು !

ಅರಳಲೆಮ್ಮ ಎದೆಯ ಕಮಲ
ವಿಮಲ ಜಲದ ಕೊಳದಲಿ;
ಜಗದ ಕುರುಡು ಕಣ್ಣು ತೆರೆದು
ನಮ್ಮ ಬಾಳ ನೋಡಲಿ !

ಬೆಳಗಿನಮಲ ಬೆಡಗಿನಂತೆ
ಭಾವ ಉಕ್ಕಿ ಹರಿಯಲಿ;
ನನ್ನ ನಿನ್ನ ಅಂತರಂಗ
ಜೇನುಹನಿಯ ಸುರಿಯಲಿ !

ಆತ್ಮದೇವನೆದುರಿನಲ್ಲಿ
ನಮ್ಮ ಶಪಥ ನಡೆಯಲಿ;
ಪ್ರಾಣಪಕ್ಷಿ ಹಾರುವನಕ
ಪ್ರೇಮಪೂಜೆಗೊಳ್ಳಲಿ !

ಸತ್ಯ, ಪ್ರೀತಿ, ಸ್ನೇಹ, ಸೇವೆ ನಮ್ಮ ಬಾಳ ಬೆಳಗಲಿ
ಜಗದ ಕುರುಡು ಕಣ್ಣು ತೆರೆದು ನಮ್ಮ ಬಾಳ ನೋಡಲಿ !

# ಬಾಳಿನಾಟ !

ಹಸುಳೆತನದಲಿ ತರಳೆಯಾನಂದ ಸಾಗರದಿ
ತೇಲಿ ಮುಳುಗುತ ಕೇಕೆ ಹಾಕುವಂತೆ,
ತಂದೆ-ತಾಯಿಗಳರಿವ, ಜಗದ ಜಂಜಡದರಿವ
ಅರಿವನೆಲ್ಲವ ಮರೆದು ಕುಣಿಯುವಂತೆ,

ತಾನೆ ಈ ಜಗವಾಗಿ, ಈ ಜಗವೆ ತಾನಾಗಿ
ಹರ್ಷದುತ್ಕರ್ಷೆಯನು ಸೂಸುವಂತೆ
ಮನವು ಒಪ್ಪಿದ ಎರಡು ಗೊಂಬೆಗಳ ಮದುವೆಯನು
ಸಾನಂದ ಸುಂದರದಿ ಗೈಯುವಂತೆ,

ಕೊನೆಗೆ ಮನಸೋತೊಡನೆ ಗೊಂಬೆಗಳ ಮುರಿದು,
ಮದುವೆಯನು ಮಸಣದೊಲು ಮಾಡುವಳು ಮುನಿದು.
ಅಂತೆ ಮಾಡಲು ಬೇಡ ಬಾಳ ಓ! ನಲ್ಲೆ,
ಆಟ ಮುಗಿವನ ಜೋಕೆ ನನ್ನೆದೆಯು ಸೊಲ್ಲೆ !

# ತರಳೆಯರಿಗಿನಿವಾತು

ನಿನ್ನಿನೀ ಮೊಗ್ಗು ಇಂದರಳಿ ಸೌಗಂಧದಲಿ
ಶೋಭಿಸುತಲಿದೆ ಸುಂದರಾಂಗಿಯಂತೆ.
ಇಂದೊಂದು ದಿನ ನಂದನಾನಂದದಿಂ ಮೆರೆದು
ನಾಳೆ ತೋರ್ಪುದು ಮರಣ ಹೊಂದಿದಂತೆ.

ಮುಂಜಾವಿನೊಳಗುದಯರಾಗದೊಳು ಬಹದಿನಪ
ನೀಲಿಮಾಕಾಶವನು ಏರುತಿಹನು;
ತನ್ನಾತ್ಮ ತನಿವೆಳಕಿನೊಳು ಜಗವ ಬೆಳಬೆಳಗಿ
ಬೈಗಾಗೆ, ಇಳೆಯೊಳಗೆ ಇಳಿಯುತಿಹನು !

ಅಂತೆಯೇ ಯೌವನೋದಯ ಸುಪ್ರಭಾತದಲಿ
ರಸದೂಟ ಪ್ರಣಯಿಗಳಿಗೊದಗಿ ಬಹುದು;
ಈ ಕಾಲವನು ಕಳೆದರಿನ್ನಿಲ್ಲ ಇನ್ನಿಲ್ಲ
ಇಳಿವಯದೊಳೆಲ್ಲ ಕನಸಾಗಿ ಬಹುದು !

ಅದಕೆಂದು ಇಂದು ನಾಳೆಂದು ತೆಡಗೈಯದಲೆ
ಇನಿಯಗೆದೆರಸ ನೀಡಿ ತಣಿಯಬೇಕು.
ತಾರುಣ್ಯದೀ ಹಣ್ಣು ಹಾಳ್ಜೇನ ಸವಿ ಸವಿದು
ಘೋರ ಯಾತನೆಯನ್ನು ನೀಗಬೇಕು !

( " Counsel to girls " ಎಂಬ ಕವನಾನುವಾದ )

# ಮಿಕ್ಕ ಜಗವ ಮರೆತಿರೆ!

ನಿನ್ನ ನೆನಹು ತುಂಬಿಬರೆ
ಭಾವಭಂಗಿ ಬಿಂಬುತಿರೆ,
ಚಿತ್ರವೆತ್ತೊ ಚಲಿಸುತವುರ
ಮುತ್ತ ಮುತ್ತೆ ನೆನೆದಿರೆ;
ನಂದನಾನಂದ ವಿರೆ
ತುಟಿಗೆ ತುಟಿಯು ಸಂದಿರೆ.
ನಾಕ ಲೋಕವಾಗುತಿರೆ
ನಾನು ನಿನ್ನೊಳಡಗಿರೆ;
ನಿನ್ನ ತೋಳ ತೆಕ್ಕೆಯಲ್ಲಿ
ಮಿಕ್ಕ ಜಗವ ಮರೆತಿರೆ !

ಎದೆಗೆ ಎದೆಯು ಹೊಂದುವಲ್ಲಿ,
ಯಾವುದೇನೊ ಬಂಧವಲ್ಲಿ;
ನನಗು ನಿನಗು ನಿಲುಕದಂಥ ಪಾರ-
ಲೋಕವೆಮಗಿರೆ.
ನಿನ್ನ ನೆನಹು ತುಂಬಿಬರೆ,
ನಂದನಾನಂದವಿರೆ;
ತುಟಿಗೆ ತುಟಿಯು ಸಂದಿರೆ !

# ಓರಿಗೆಯ ಗೆಳತಿಯರು

ಓರಿಗೆಯ ಗೆಳತಿಯರು ಒಂದೆಡೆಗೆ ಕೆಲೆದಾಗ
ಕನಸಿನೊಳು ಇನಿಯರನ ಕಂಡಿದ್ದರು,
ಅವರವರ ಕೈಹಿಡಿದು ಸಂಪ್ರೀತಿಯೊಳಗಲೆದು
ದಾಂಪತ್ಯದಾ ರಸವನುಂಡಿದ್ದರು.

ನರಲೋಕವನ್ನಳಿದು, ಸುರಲೋಕವನು ಸೇರಿ;
ಅಮರತ್ವವನು ಗಳಿಸಿಕೊಂಡಿದ್ದರು.
ಶೃಂಗಾರ ರಸಧುನಿಯೊಳಾಗವರು ಮಿಂದೆದ್ದು
ಅಪ್ಸರೆಯರಂದವನು ಧರಿಸಿದ್ದರು.

ತಮ್ಮತಮ್ಮೊಳಗವರು ಹೆಮ್ಮೆಯನು ಪಡೆಪಡೆದು
ತಮ್ಮಂದ ಚಂದಗಳ ಹೊಗಳಿದ್ದರು.
ತಮ್ಮೊಳಿಹ ಆ ದಿವ್ಯ ಸೌಂದರ್ಯದುಬ್ಬಿನಲಿ
ಕೈಲಾಸಗಿರಿಯನ್ನೆ ಮೀರಿದ್ದರು !

ವಿಶ್ವವನೆ ಮರೆತಂದು, ಮೂಲೋಕದಲಿ ನಿಂದು
ಸ್ವರ್ಣ ಸೇತುವೆಯನ್ನು ಕಟ್ಟಿದ್ದರು.
ಕಲ್ಪನೆಯ ಸಾಮ್ರಾಜ್ಯದಾಡಳಿತೆಯೊಳು ಮೆರೆದು
ಇಂದ್ರಪಟ್ಟವ ಇನಿಯಗಿಟ್ಟಿದ್ದರು.

ಎಲ್ಲರೂ ಕೆಲೆದಾಗ ಮನದಿ ಮನ ಬೆರೆತಾಗ
ಕನಸಿನೊಳು ಇನಿಯರನ ಕಂಡಿದ್ದರು.
ಓರಿಗೆಯ ಗೆಳತಿಯರು ಒಂದೆಡೆಗೆ ಮೆರೆದಾಗ
ದಾಂಪತ್ಯದಾ ರಸವನುಂಡಿದ್ದರು !

## —ಗೆ

ಯಾವ ಜನ್ಮವ ಕಳೆದು
ಈ ಜನ್ಮದೊಳು ಬಂದು
ನೀನೆನ್ನ ಮನದೊಳಗೆ ಬೆಸುಗೆಗೊಂಡೆ ?
ಎಲ್ಲವನು ನೀ ಮರೆತು,
ಸಾಮರಸ್ಯದಿ ಬೆರೆತು,
ನನ್ನಾವ ರೂಪಕ್ಕೆ ಮೋಹಗೊಂಡೆ ?
ಹಣವಿಲ್ಲವೆನ್ನೊಳಗೆ
ಗುಣವಿಲ್ಲವೆನ್ನೊಳಗೆ
ನುತಿಸಿಕೊಳ್ಳುವ ಆತ್ಮವೆನ್ನೊಳಿಲ್ಲ !

ಏಸು ಜನ್ಮವ ಕಳೆದು,
ಬಣ್ಣಬಣ್ಣವ ಬಳೆದು,
ನನಗಾಗಿ ನೀ ಮೀಸಲಾಗಿ ಬಂದೆ ?
ಬರುವಾಗ ನೀನಾವ ಹೊಸ ಬೆಳಕ ತಂದೆ ?

ಮೌನವನು ಭೇದಿಸುತ
ಅಂಧವನು ಭೇದಿಸುತ
ಕೋಟಿ ಕೋಟಲೆಗಳನು ಮೆಟ್ಟಿ ತುಳಿದು,
ಬಂದೆಡರಿಗೆದೆಗೊಟ್ಟು
ಸಾಹಸದ ಮನವಿಟ್ಟು
ಮುದಗೊಂಡು ಮೈದಾಳಿ ಬಂದೆ ಇಳಿದು !
ನಿನಗಾವ ಕಾಣಿಕೆಯು
ನಿನಗಾವ ಹೊಗಳಿಕೆಯು
ಇದೊ ನಿನ್ನ ಕೊರಳಿಂಗೆ ಪ್ರೇಮಮಾಲೆ !

ಯಾವ ಆಶೆಯುನಿಡುತ
ಯಾವ ಎಣಿಕೆಯುನಿಡುತ
ನನ್ನನ್ನೆ ನೀ ಬಯಸಿ ಉದಿಸಿ ಬಂದೆ ?
ನೀನಾವ ಹೊಸ ಬೆಳಕ ಹೊತ್ತು ತಂದೆ ?

ಇಂದು ಕೂಡಿಹ ಮನವು
ಒಂದೆಯಾಗಿಹ ತನುವು
ಎಂದಾದರೊಂದೆ ಎಂದೆನಿಸಿಕೊಳಲಿ !
ನಮ್ಮೊಳಗೆ ಸಿರಿ ಇರಲಿ,
ಮೇಣುಂದಿಸಿ ಕಿರಿ ಬರಲಿ,
ಎಲ್ಲ ದೇವನ ಕೊಡುಗೆ ಎಂಬುದಿರಲಿ !
ಉಕ್ಕಿರಲಿ ಸವಿಸೊಲ್ಲು
ನಮ್ಮೆದೆಯೊಳೆಲ್ಲೆಲ್ಲು
ತಾಳ್ಮೆಯಲಿ ತೂಗಿರಲಿ ನಮ್ಮ ಬಾಳು !

ಏಸು ಜನ್ಮದ ಕನಸೊ
ಏಸು ಜನ್ಮದ ನನಸೊ
ಯಾವ ಪುಣ್ಯದ ಫಲವೊ ಕಂಡರಾರು ?
ಎಲ್ಲಿ ನಿಲ್ಲುವದೇನೊ ಬಲ್ಲರಾರು ?

ಯಾವ ಜನ್ಮವ ಕಳೆದು
ಈ ಜನ್ಮದೊಳು ಬಂದು
ನೀನೆನ್ನ ಮನದೊಳಗೆ ಬೆಸುಗೆಗೊಂಡೆ ?
ನನ್ನಾವ ರೂಪಕ್ಕೆ ಮೋಹಗೊಂಡೆ ?

# ಅಮೃತರಸಪಾಕಂ !

ನಿನ್ನ ಸಂಗದಿ ನಲ್ಲೆ
ಇಹುದೆನಗೆ ನಾಕಂ,
ನಿನ್ನಧರ ಚುಂಬನದಿ
ಅಮೃತ ರಸ ಪಾಕಂ !
ನಿನ್ನನುಳಿದರೆ ಇಲ್ಲ
ದೇವನೀ ಲೋಕಂ.

ನೀನೆನ್ನ ಬಳಿಯಿರಲು
ಸಕಲಸುಖ ಸಾರಂ;
ಹೃದಯಾಂತರಾಳದಲಿ
ಪ್ರಣಯಪ್ರಸಾದಂ !
ನಾನು ನೀನೊಂದಾಗೆ
ಹರನಿಗಭಿಷೇಕಂ,
ನಿನ್ನಧರ ಚುಂಬನದಿ
ಅಮೃತ ರಸಪಾಕಂ.
ನಿನ್ನನುಳಿದರೆ ಇಲ್ಲ
ದೇವನೀ ಲೋಕಂ !

# ಪ್ರೇಯಸಿಗೆ—

ಓ! ಹೃದಯ ಮೂರುತಿಯೆ, ನನ್ನೆದೆಯ ಆರತಿಯೆ
ಎಲ್ಲಿ ಓ, ನೀನೆಲ್ಲಿ ಮೂಡಿ ಬಾರೆ!
ನನ್ನೆದೆಯ ನಿನ್ನೆದೆಯ ಬಂಧಿಸಿಹ ಸಂಕೋಲೆ
ಕಳಚಿಲ್ಲ, ಕಳಚಿಲ್ಲ ಕಾಣು ಬಾರೆ!
ನಿನಗಾಗಿ ನಾನಿರುವೆ
ನನಗಾಗಿ ನೀನಿರುವಿ
ನಿನ್ನಾತ್ಮದಾನಂದವೆನ್ನದಾಗಿರಲಿ
ನನ್ನಂತರಂಗದಲಿ ತೇಲುತಿರಲಿ.
ನನ್ನೆದೆಯ ನಿನ್ನೆದೆಯ ಬಂಧಿಸಿಹ ಸಂಕೋಲೆ
ಕಳಚಿಲ್ಲ ಓ, ಗೆಳತಿ ಕಾಣು ಬಾರೆ!

"ನೀವಿಲ್ಲದಾಗೆಲ್ಲ ಬರಿಗೋಳು ಗೋಳೆಂ" ದು
ನೀನಂದು ಕಣ್ಣೀರ ಸ್ವೈದೊಳೆಯಲಿಲ್ಲೆ ?
"ನಾನೆಲ್ಲಿ ಇಹೆನಲ್ಲಿ ನಿನ್ನನ್ನೆ ಕಾಣುವೆನು"
ಎಂದಾಗ ನಸುನಗೆಯ ಬೀರಲಿಲ್ಲೇ ?
ನನ್ನಂತರಂಗದಲಿ
ನಿನ್ನಂತರಂಗವಿದೆ
ನನ್ನ ನಿನ್ನಾತ್ಮದೊಳಗಮರತ್ವವಿಹುದು
ಇಂದಿಲ್ಲವಾಗಿಹುದು ಅದು ಎಂದು ಬಹುದು ?
ನನ್ನೆದೆಯ ನಿನ್ನೆದೆಯ ಬಂಧಿಸಿಹ ಸಂಕೋಲೆ
ಕಳಚಿಲ್ಲ ಓ! ಗೆಳತಿ ಕಾಣು ಬಾರೆ.

ಮರೆಯಲಾರೆನು ನಿನ್ನನೊಂದಿನಿತು ನಾನಿಲ್ಲಿ
ನನ್ನ ಹೃದಯವೆ ಇಂದು ನೀನಾಗಿಹೆ.
ಮರೆದಪೆಯಾ ನೀನಾರೆ? ನಿನ್ನೆದೆಯನೆಂದಾರೆ?
ನಿನ್ನೆಲ್ಲ ಸರ್ವಸ್ವ ನಾನಾಗಿಹೆ !

ಎಂದೆಂದಿಗೂ ಕಾಮ ಪ್ರೇಮವಾಗಿರಲಿ
ನಿನ್ನ ಭಕ್ತಿಯು ದೇವ ನಾನಾಗಿ ಇರಲಿ !
ನನ್ನೆದೆಯ ನಿನ್ನೆದೆಯ ಬಂಧಿಸಿಹ ಸಂಕೋಲೆ
ಕಳಚಿಲ್ಲ ಓ ! ಗೆಳತಿ ಕಾಣು ಬಾರೆ.

ಬಾಲ್ಯದೊಳು ಮೊಳೆತದ್ದು, ಯೌವನದಿ ಗಿಡವಾಗಿ
ಹಣ್ಣು–ಹೂ–ಕಾಯ್ಗಳನು ಬಿಡುತಲಿಹುದು,
ಆ ಹಣ್ಣಿನಮೃತರಸವನ್ನೀಂಟಿ ಮೆರೆಯಲಿಕೆ
ದಿನದಿನವು ನನ್ನೆದೆಯು ತುಡಿಯುತಿಹುದು !
ಜೋಕಾಲಿ ಜೀಕಿದೆವು
ಮರಮರಕು ಹಾರಾಡಿ,
ಹಬ್ಬ ಹುಣ್ಣಿಮೆಗಳಲಿ ಒಂದಾಗಿ ಮೆರೆದು;
ಇಂದೊರಲುತಿಹೆ ನಾನು ಹಾ ! ಎಂದು ನೆನೆದು.
ನನ್ನೆದೆಯ ನಿನ್ನೆದೆಯ ಬಂಧಿಸಿಹ ಸಂಕೋಲೆ
ಕಳಚಿಲ್ಲ ಓ ! ಗೆಳತಿ ಕಾಣು ಬಾರೆ.

—ಇಂದಿನಾ ಈ ಪ್ರೇಮದಿಂದುದಿಸಿ ಮುಂದಿನಾ—
ಜನ್ಮದಲಿ ಒಂದಾಗಿ ಮಾಡೋಣವಂತೆ.
ಹಾಡೋಣ, ಹರಸೋಣ ದೇವರನು ಎಡೆಬಿಡದೆ
ಮುಂದಿನಾ ಜನ್ಮದಲಿ ಒಂದಾಗುವಂತೆ.

ಇಂದಿಗೂ ನನ್ನವಳು,
ಎಂದಿಗೂ ನನ್ನವಳು,
ಎಂದೆಂದಿಗೂ ನೀನು ನನ್ನವಳು ಬಾರೆ;
ಅಂದಿನಾ ಆ ಮುತ್ತನಿನ್ನೊಮ್ಮೆ ತಾರೆ.
ನನ್ನೆದೆಯ ನಿನ್ನೆದೆಯ ಬಂಧಿಸಿಹ ಸಂಕೋಲೆ
ಕಳಚಿಲ್ಲ ಓ! ಗೆಳತಿ ಕಾಣುಬಾರೆ.

# ಹೆಣ್ಣು ಹುಟ್ಟಿದಾಗ.... ?

ಹೆಣ್ಣು ಹುಟ್ಟಿದಾಗ ಖಿನ್ನಮನದಿ
ಸುಮ್ಮನಾದಿರಿ.
ಗಂಡು ಹುಟ್ಟಲಿಲ್ಲವಲ್ಲಾ....ಎಂದು
ಮಿಡುಗಿ ಹೋದಿರಿ !
ಮೊದಲಿಗಿದ್ದ ಉತ್ಸುಕತೆಯದೆಲ್ಲ
ಉಡುಗಿ ಹೋಯಿತು;
ನಿಮ್ಮ ಕಲ್ಪಕತೆಯು ಗಗನದಲ್ಲಿ
ಲೀನವಾಯಿತು !

ಮಗನ ಪಡೆಯುವಾಶೆ ತಳದ ನೀರಿ-
ನಂತೆ ಹೆಚ್ಚಿತು;
ಮಗಳ ಮರೆದು ನಿಮ್ಮ ಭಾವ, ಹಕ್ಕಿ-
ಯಾಗಿ ಹಾರಿತು !
ಚಿಂತೆ ಏತಕಾಗಿ ಇನಿಯ ? ಚಿಂತೆ
ಮುಪ್ಪು ಎನುವರು;
ಅತ್ತು ಬಾಳಲೇನು, ಆದುವೆ ಕತ್ತೆ-
ಬಾಳು ಎನುವರು !

ಜಗದ ಮೂಲವೆಂದೆ ' ಶಕ್ತಿ ' ತಾನೆ
ಪೂಜೆಗೊಳುವಳು;
ಜೀವಿಗಳಿಗೆ ಜೀವವಾಗಿ ' ಲಕ್ಷ್ಮಿ '
ರೂಪಗೊಂಡಳು !

ಹೆಣ್ಣಿನಿಂದಲಲ್ಲವೇನು ನೀವು .
ಜನಿಸಿ ಬಂದುದು ?
ಹೆಣ್ಣಿನಿಂದಲಲ್ಲವೇನು ಈ ಪ್ರ-
ಪಂಚ ನಡೆವದು ?
ಹೆಣ್ಣು-ಗಂಡು ಎಲ್ಲ ಒಂದೆ ಮಕ್ಕ-
ಳೆಂಬ ಮಮತೆಗೆ;
ಬೆಳಕು ಚಿಮ್ಮಿ ಬಂದರಾಯ್ತು ನಮ್ಮ
ಬಾಳ ಕಣತೆಗೆ !

## ಕಬ್ಬ—

ನಿನ್ನ ನಡೆ, ನಿನ್ನ ನುಡಿ ಒಂದೊಂದು ಕಬ್ಬ,
ನಿನ್ನ ಚಲ್ವಿಕೆ ಎನ್ನ ಕಂಗಳಿಗೆ ಹಬ್ಬ !
ಮರೆವೆ ನನ್ನನು ನಾನೆ
ನೀ ಸನಿಹಕಿರಲು;
ಕಾಣಲಾರದ ಲೋಕ
ಸಂಗಸಂದಿರಲು !

ಮತ್ತೆ ಅಯ್ಯೋ ! ಹಲ್ಲೆ, ಅಗಲಿದೊಡೆ ನರಕ
ಬೇಡವೆಮಗಾ ಜ್ವಾಲೆ ಕೊನೆಯ ತನಕ !
ನಿನ್ನ ನಡೆ ನಿನ್ನ ನುಡಿ
ಒಂದೊಂದು ಕಬ್ಬ,
ನಿನ್ನ ಚಲ್ವಿಕೆ ಎನ್ನ
ಕಂಗಳಿಗೆ ಹಬ್ಬ !

# ಅಂತರ್ವಾಣಿ

" ಎಂತಿರುವಿ ಸುಂದರಿಯೆ, ಎಂತಿರುವಿ ಸಾನರಿಯೆ
ಎಂತಿರುವಿ ಓ ! ನೀನು ಅಂತರಿಕ ಮಣಿಯೆ ? "
" ನೀವೆಂತು ಇರುತಿಹಿರೊ ಅಂತೆ ನಾನಿರುತಿರುವೆ
ನನ್ನಂತರಂಗದೊಳು ಮೊರೆಯುತಿಹ ದನಿಯೆ "

" ನಾನನಿಶ ಕರೆಯುವೆನು, ಕನಸಿನೊಳು ಬೆರೆಯುವೆನು
ನನಸಾಗದಿರೆ ನೆನಸಿ ಕುದಿಯುತಿರುವೆ "
" ನೀವಲ್ಲಿ ದೂರಿನಲಿ, ನಾನಿಲ್ಲಿ ತೌರಿನಲಿ
ನನ್ನ ಮನದಲಿ ನಿಮ್ಮ ಕಂಡುಕೊಳುವೆ "

" ನಿನ್ನನುಳಿದರು ನಾನು ನಿನ್ನೊಳಗೆ ಇಹೆನೆಂದು
ನನ್ನ ಮನದಬ್ಬರಕೆ ನೆವ ಹೇಳುತಿರುವೆ "
" ನಿಮ್ಮಂತೆಯೇ ನಾನು ಎದೆಯಾಂತರಾಳದಲಿ
ಪ್ರಣಯಭಂಗಿಯ ದಿನವು ತಂದುಕೊಳುವೆ "

" ಎಂತಾದರೂ ಆತ್ಮಸಮ್ಮಿಲನವಾಗುವುದೆ
ಕಾಣಲಾರದ ಲೋಕ ಕಾಣಬಹುದೆ ? "
" ಅಹುದು ಕೇಳಿರಿ ಎನ್ನ ಜೀವದೊಡೆಯರೆ ನೀವು
ಚಿತ್ರ ತೆಗೆದಿಹ ಗಿಳಿಯು ನುಡಿಯಬಹುದೆ "

" ಸತ್ಯವಿದು ಸುಂದರಿಯೆ, ಮಾನಸಿಕ ಮಾಧುರಿಯೆ
ನನ್ನ ಎದೆ ಕಾಸಾರದರವಿಂದವೆ ? "
" ಎನ್ನ ಜೀವನ ಸೊಗವೆ, ಎನ್ನ ಬಾಳಿನ ಮೊಗವೆ
ಇನ್ನು ತಿಂಗಳಿನಲ್ಲಿಗಲ್ಲಿ ಬರುವೆ "

## ನಿಜ ದರ್ಶನ

ತೋರುವಳಾರೀ ಸುಂದರ ನಾರಿ
ಮುಗುದತೆಯನು ಮೀರಿ,
ಮಿಂಚುವಳತಿ ಕಣ್ಣಂಚಿನ ನೋಟಕೆ
ಮಂದಸ್ಮಿತ ಬೀರಿ !
ಹಸುರಿನ ಬನಗಳ ಮುದ್ದಿಸಿ, ಮೋಹಿಸಿ
ಪಡೆದ ಪಚ್ಚ ಸೀರಿ,
ವಿಕಸಿತ ಕುಸುಮಗಳಿಸೆಯುವವಂದದಿ
ನಾಗರ ಜಡೆ ಏರಿ !
ಸುಳಿಗಾಳಿಗು ಸಹ ಸುಳಿದಾಡುವ ಎಳೆ-
ವಳ್ಳಿಯು ತೆಳ್ಳನೆ ಮೈಕಟ್ಟು;
ನತಿಸುವಳು ಆಹಾ ! ನಿರುತಾನಂದದಿ
ವಿಜಯೋತ್ಸಾಹವನಡಿಗಿಟ್ಟು.
ತೋರುವಳಾರೀ ಸುಂದರನಾರಿ
ಯಾರದೊ ಎದೆ ಕೋರಿ !

( ೨ )

ಕುಣಿಯುವಳೊಮ್ಮೆ—ಮಣಿಯುವಳೊಮ್ಮೆ
ಮೈಮನಗಳ ಮರೆತು,
ಯಾವುದೊ—ಅಳೆಯದ ಭಾವವ ಬೀರುತ
ನಿಲುವಳು ಭಯಭರಿತು !
ಚಿಂತೆಯ ಭಾರವ ಹೊತ್ತತಿಮಿನುಗುವ
ಕಂಬನಿದುಂಬಿದ ಕಣ್ಣುಗಳು;
ಲೋಕದ ಶೋಕವೆ ಸುಡುವಗ್ನಿಯವೊಲು
ತುಂಬಿಹ ಬಿಂಬಿಹ ಭಾವಗಳು !

ಏತಕೊ ಏನೋ ಈ ಪರಿ ಕೊರಗುವ
ತರಳೆಯು ತವಕವ ಕಲ್ಪಿಸಿದೆ;
ನೆರವನು ನೀಡಲು ನಿಲ್ಲದೆ ಅವಳೆಡೆ
ಧಾವಿಸಿ, ಕ್ರಂಧನ ಆಲಿಸಿದೆ !

ಕುಣಿಯುವಳೇಕೆ ? ಕೊರಗುವಳೇಕೆ
ಅಳು—ನಗುಗಳ ಮೇಳ;
ಈ ಪರಿ ನಡೆದಿಹ ಅವಳೀ ಜೀವಕೆ
ಕಣ್ಣೀರ್ವನಿ ತಾಳ !

(೩)

ಸಹಿಸುವದಾಗದೆ ಸನಿಹಕೆ ನಿಲ್ಲುತ
ಕೇಳಿದೆ "ನೀನಾರವಳಮ್ಮ ?
ಯಾರಿಗೆ ಈ ಪರಿ ಯಾಚನೆಗೈಯುವೆ
ನಿನ್ನವರೆನ್ನುವರಾರಮ್ಮಾ ?"

"ಈ ಜಗದಣುರೇಣುಗಳೆಲ್ಲಲ್ಲಿಯೂ
ಲೀಲಾಜಾಲವ ತೋರಿರುವಾ;
ಆದರೆ ಆ ಶಿವ, ನನ್ನೆದೆಯಾಳದಿ
ಏನೂ ತುಂಬದೆ ಮರೆತಿರುವ"

ಎನ್ನುತ ಶೂನ್ಯಾಕಾಶವ ದಿಟ್ಟಿಸಿ
ಭೂದೇವಿಗೆ ಕಣ್ಣೀರ್ಮಿಡಿದು
ನಿಲ್ಲದಿರಣ್ಣನೆ, ಹೊರಡುವೆ ಮೆಲ್ಲನೆ
ಎನ್ನುತ ಹೊರಟಳು ಉಸಿರೆಳೆದು.

" ಹೋಗುವದೆಲ್ಲಿದೆ, ಗಗನದ ಮಲ್ಲಿಗೆ
ನಿಲ್ಲೊಂದರೆಚಣ ಈ ಗಳಿಗೆ !
ನಿನಗೀ ಲೋಕವೆ ಸಾಕೆನಿಸಿರುವುದೆ ?
ಹೊರಟಿರುವೆಯಾ ನೀ ಬಿಡುಗಡೆಗೆ ? "

(೪)

" ಕಾಲವಿಲಂಬನವಾಗದು ನಡೆ ನೀ
ಕಾಣದಿರಣ್ಣನೆ ಹೊರಡುವೆನು.
ಭೂತಲದೊಳಗೆಲ್ಲಲ್ಲಿಯು ದೊರೆಯದ
ಆ ವಸ್ತುವ ನಾ ಪಡೆಯುವೆನು ! "

ಎನ್ನಲು ದಿಗ್ಭ್ರಮೆಯಾಯಿತು ಎನ್ನೊಳು
ಕೇಳಿದೆ " ಅರಸುವುದೇನಮ್ಮಾ ? "
ಏನೂ ಹೇಳದೆ ಓಡಿದ ಅವಳನು
ಬೆಂಬಿಡಿದರಚಿದೆ " ನಿಲ್ಲಮ್ಮಾ ! "

" ಕಾಣದಿರೆನ್ನಾ, ಹಿಂದಿರುಗಣ್ಣಾ
ನನ್ನನು ನೀ ಬೆಂಬಿಡಿಯದೆಯೇ "
" ಕಾಡುವುದಿಲ್ಲ, ಬೇಡುವುದಿಲ್ಲ
ನನ್ನದನೇ ಕದ್ದೊಯ್ದಿರುವೆ;
ನನ್ನದನೇನನು ನೀ ಕೊಂಡೊಯ್ದಿಹೆ
ಅದನೇ ಪಡೆಯಲು ನಾ ಬರುವೆ !

ಎನ್ನಲು ಅತ್ಯಾಶ್ಚರ್ಯದಿ ನಿಲ್ಲುತ
ಕೇಳಿದಳೆನ್ನನು " ಕದ್ದಿಹನೇ ?
" ಏನನು ಕದ್ದೆನು ಹೇಳೀ ಚಣದಲಿ
ನಿನಗರ್ಪಿಸುವೆನು ಸೋದರನೇ ! "

“ ಕಾಣಲು ಬಾರದ, ವರ್ಣಿಸಲಾಗದ
ನನ್ನೀ ಮನವನು ಸೆಳೆದಿರುವಿ;
ನಿನ್ನನು ಕಂಡೊಡೆ ನನ್ನನೆ ಮರೆತೆ,
ಆ ಸಮಯದಿ ನೀ ಪಡೆದಿರುವಿ ! ”

(೫)

ಎನ್ನಲು ಮುಗುದೆಯ ಮನದಾನಂದವು
ಬಾನಿಗು ಮಿಗಿಲಾಯಿತು ಹಬ್ಬಿ;
ನಿಶ್ಚಲ ಚಿತ್ತದಿ ನಿರ್ಗಮವಾದಳು
ನನ್ನಾತ್ಮವ ತಬ್ಬಿ !
ಕೇಳಿತು ಎದೆಯೊಳು ಮೆಲುವಾತಿನ ಮೊರೆ
“ ನಾನರಸುವದೇ ಪ್ರೇಮವನ
ಜಗದೊಳಗೆಲ್ಲಿಯು, ಸಿಗದೆಯೆ ನಿನ್ನೊಳು
ಪೊರೆವದು ಪ್ರಿಯಕರ ಇಂದ್ರವನ ”
ಎನ್ನುವ ಇನಿವಾತಿನ ಅಧರಾಮೃತ
ಎನ್ನೆಡೆ ವಾಣಿಯೊಳುಸುರಿ ಬರೆ,
“ ಪ್ರೇಮದ ಪರಮೋಲ್ಲಾಸದ ಮೂರ್ತಿಯೆ
ನಿನ್ನನು ಕೈಬಿಡೆ ” ಎನ್ನುತಿರೆ;
ಕೇಳಿದೆ “ ಕೊಡು ನೀ ಪಡೆದಿಹ ಮನವನು
ಹೊರಡುವೆ ದೂರದ ತೀರದೆಡೆ ”
ಎನ್ನುವ ಮಾತಿಗೆ ಆ ಮುಗುದೆಯ ಮನ
ಪ್ರೇಮದ ಪೂಜೆಯ ಗೈವ ಎಡೆ !
ಅರ್ಪಿತವಾಯಿತು ನನ್ನಾತ್ಮಕೆ ಆ
ಮುಗ್ಧ ಮನೋರಾಗಿಣಿಯ ಎದೆ;
ನೈಜಪ್ರೇಮದ ನಿಜ ದರ್ಶನದಲಿ
ಮಳೆಗರೆಯಿತು ಓ ! ಪ್ರೇಮಸೊದೆ.

ಈರ್ವರ ಅಮಿತಾನಂದದ ಮನಗಳ
ಮಿಳನವು ಮಧುಗಂಗೆಯಲಿ ತೆರೆ,
ಲೋಕವೆ ನಾಕವು—ಎದೆಗೆದೆ ಹೊಂದಲು
ಮುಗುದೆಯ ಮನವನು ಚುಂಬಿಸಿರೆ !

# ಇಬ್ಬಗೆ

ದೂರ ಬಹು ದೂರದಲಿ ಈ ಬಾಳಿನಾಚೆಯಲಿ
ಬೈರಾಗಿಯಾಗಲೆಳಸುವೆನು ನಲ್ಲೆ;
ಮತ್ತೆ ಈ ಸಂಸಾರದಾನಂದವಂ ತೊರೆಯೆ
ತಾಳಲಾರದ ತಾಪ ಅದನು ಬಲ್ಲೆ !

ದಿನವಾದರೆನ್ನೆದೆಗೆ ಮುಂಬರಿದು ಮುತ್ತುವವು
ನೈರಾಶ್ಯದಭ್ರಗಳು ಇರುಳ ತೋರಿ;
ನಿನ್ನ ಕಂಡೊಡೆ ಮತ್ತೆ ಹೂವಾಗಿ ಅರಳುವವು
ಮೋಹದಾಲಿಂಗನದಿ ಮುದವ ಸಾರಿ !

ಎನಿತೊಂದು ವಿಷಗಾಳಿ ಬೀಸಿ ಬರುತಿಹವಯ್ಯೊ
ಸಾವು-ನೋವಿನ ಸಂತೆ ನೆರೆಯುತಿಹುದು.
ಎನುತ ನಾನೇಕಾಗ್ರ ಚಿತ್ತಸ್ಥನಾಗಿರಲು
ಎಲ್ಲಿಯೋ ಮೃದುಗಾಳಿ ತೀಡುತಿಹುದು.

ಸತ್ಯವಲ್ಲೀ ಬಾಳು ಮಿಥ್ಯವಿಹುದೆಂದೊಮ್ಮೆ
ನಶ್ವರತೆಯನು ತೋರುತಿಹುದು ಕನಸು;
ಇದು ಸತ್ಯ, ಇದು ದಿವ್ಯ, ಇದು ಸಚ್ಚಿದಾನಂದ,
ಇದು ಅಮರವೆನ್ನುವದು ರಸಿಕಮನಸು !

ನಿಮಿಷ ನಿಮಿಷಕ್ಕೆನಿತು ಮೋಹ-ತ್ಯಾಗದ ಭಾಗ
ವಜ್ರದಾಘಾತದೊಲು ಎರಚುತಿಹವು;
ಬಾಳ ಯಜ್ಞವ ನಡೆಸಿದೊಡನೆಲ್ಲವೂ ಸಿದ್ಧಿ
ಎಂಬ ಭಾವಗಳೊಮ್ಮೆ ಅಲೆಯುತಿಹವು !

# ಬೆಸುಗೆ ಬಿಚ್ಚದಿರಲಿ !

ನಾಡ ಬಿಡುಗಡೆ ನಲ್ಲೆ
ನಾಡಿಗಿರಲಿ,
ಹಳೆರಾಜ್ಯ, ಹೊಸರಾಜ್ಯ
ಹುಟ್ಟುತಿರಲಿ.
ನನ್ನ ಸೆರೆ ನಿನಗಿರಲಿ,
ನಿನ್ನ ಸೆರೆ ನನಗಿರಲಿ,
ಬಿಡುಗಡೆಯ ಮಾತೇಕೆ
ಬಂಧವಿರಲಿ;
ನನ್ನ ನಿನ್ನೆದೆ ಬೆಸುಗೆ
ಬಿಚ್ಚದಿರಲಿ !
ಹಾಲು ಹೊಳೆಯುಲಿ ಚಂದ್ರ
ಈಜುತಿರಲಿ,
ಬಾನಿನಂಗಳ ಬೆಡಗ
ಸೂಸುತಿರಲಿ,
ಕೊಳದ ಕುಮುದವು
ಚಂದ್ರಗರಳುತಿರಲಿ;
ಕಣ್ಣು ಮುಚ್ಚದೆ ಲೋಕ
ನೋಡುತಿರಲಿ !
ಆ ಸಮಯ ನಾವಿರುವ
ಒಂದೆದೆಯಲಿ !
ಆ ಚಂದ್ರ, ಆ ಕಾಂತಿ,
ಆ ಬಾನು, ಕಾನು

ಬೆಣ್ಣೆ ಬೆಟ್ಟಗಳಾದ
ಓ! ಗಿರಿಯ ಸಾನು,
ಆ ಕೊಳವು, ಆ ಕುಮುದ
ಮಧುರವಲ್ಲ;
ಅವಕಿಂತಲೂ ಮಧುರ
ನಿನ್ನ ಗಲ್ಲ!

(೨)

ನಮ್ಮ ಪ್ರಣಯಕೆ ಬೊಮ್ಮ
ದಿಗಿಲುಗೊಂಡಿಹನು.
ವಿಸ್ಮಯಾಂಬುಧಿಯಲ್ಲಿ
ತೇಲುತಿಹನು;
"ನನ್ನ ಕಲೆ ಎಲ್ಲದರ
ಸಾರವೀ ಸೃಷ್ಟಿ
ಆದರೇಕಿಲ್ಲಯ್ಯೊ
ಪ್ರಣಯಿಗಳ ದೃಷ್ಟಿ!
ಎಲ್ಲ ಮರೆತಿಹ ನಲ್ಲ ನಲ್ಲೆಯರು ಇವರು
ಎರಡಾತ್ಮಕೊಂದೆ ಹೂ ಅರಳಿಸಿಹರು"
ಎಂದೆಂಬ ನುಡಿಯಿಂದ
ಬೆರಗಾಗುತಿಹನು.
ಮತ್ತೆ ಸತ್ಯವನರಿತು
ನಲಿದಾಡುತಿಹನು!
ಓ! ನಲ್ಲೆ ಬಿಡುಗಡೆಯ
ಬಯಸದಿಹ ಆಟ

ಮುಂದುವರಿಯಲಿ ನಾವು
ಮಾಡಿದುದೆ ಮಾಟ !
ನನ್ನ ಸೆರೆ ನಿನಗಿರಲಿ
ನಿನ್ನ ಸೆರೆ ನನಗಿರಲಿ
ಬಿಡುಗಡೆಯ ಮಾತೇಕೆ
ಬಂಧವಿರಲಿ;
ನನ್ನ ನಿನ್ನೆದೆ ಬೆಸುಗೆ
ಬಿಚ್ಚದಿರಲಿ !

# ಜೇನಿನ ಮಳೆ!

ನೀವೇ ನನ್ನಯ ಬಳಿಯಲಿ ಕುಳಿತಿರೆ
ಜೇನಿನ ಮಳೆ ಇರದಿದ್ದೀತೆ?
ನಿಮ್ಮನ್ನುಳಿದಿರೆ, ಬೇಸರ ಬರುತಿರೆ
ಎದೆವಳ್ಳಿಯು ಕುಡಿ ಇಟ್ಟೀತೆ?

ನಭದೊಳು ದಿನಕರನುದಯವು ಆಗದೆ
ಕಮಲವು ದಳದಳವರಳೀತೆ?
ಕೌಮುದಿ ಹಾಲ್ಗಡಲಿಕ್ಕದೆ ಇರುತಿರೆ
ಕುಮುದದ ಕಣ್ಣದು ತೆರೆದೀತೆ?

ಜೀವಕೆ ಜೀವವು ನಲುಮೆಯ ತೋರದೆ
ಅಕ್ಕರೆ ಉಕ್ಕುತ ಬಂದೀತೆ?
ಬೆಳೆವಾ ಬಳ್ಳಿಗೆ ಬಿಸಿನೀರೆರೆವರೆ
ಪ್ರೇಮಾನಂದವ ಕಂಡೀತೆ?

ಕಿರುಚುವ ಕೂಸದು ತಾಯಿಯನುಳಿದಿರೆ
ತಾಳ್ಮೆಯ ತೊಟ್ಟಿಲು ತೂಗೀತೆ?
ನೀರೆಂದೊರಲುವ ಬಾಯಾರಿಗನಿಗೆ
ವಿತ್ತವನಿತ್ತರೆ ಹಿಂಗೀತೆ?

ಚೈತ್ರದ ಚಿಗುರನ್ನುಳಿದಿರೆ ಕೋಗಿಲೆ
ತಾನೇ ಕೂಜನ ಗೈದೀತೆ?
ಕಾರ್ಗಾಲವನುಳಿದಂಥ ಮಯೂರವು
ತಾಳವ ಹಾಕುತ ಕುಣಿದೀತೆ?

ನಿಮ್ಮನ್ನುಳಿದಿರೆ ಪ್ರೇಮಾರಂಗವು
ಹಿಂಗದೆ ಇಂಗದೆ ಬಿಟ್ಟೀತೆ?
ನೀವೇ ನನ್ನಯ ಬಳಿಯಲಿ ಕುಳಿತಿರೆ
ಜೇನಿನ ಮಳೆ ಇರದಿದ್ದೀತೆ?

---

# ಎಂತಿಹಳೊ ನನ್ನವಳು

ಎಂತಿಹಳೊ ನನ್ನವಳು, ನನ್ನನ್ನೆ ನೆನೆವವಳು
ಎಂತಿರುವಳೋ ತವರಿನೂರಿನಲ್ಲಿ;
ಎಂತಿಹಳೊ ನನ್ನರಸಿ, ಮನಸಿಂಗೆ ಮುದವಿರಿಸಿ;
ಎಂತಿರುವಳೊ ದೂರದೂರಿನಲ್ಲಿ

ಎಂದಾದರೊಂದು ದಿನ ಬಿರುನುಡಿಯನೆಂದಾಗ
ಬಳಬಳನೆ ಕಣ್ಣೀರ ಸುರಿಸುವಾಕೆ;
ನಾನಿರದ ದಿನವೆಲ್ಲ ನನ್ನನ್ನೆ ಬಯಬಯಸಿ,
ಕೊರಗಿಟ್ಟು, ಮರುಮರುಗಿ ಮಿಡುಗುವಾಕೆ

ಬೇಸತ್ತು ಬಂದಾಗ, ಕೈಸೋತು ನಿಂದಾಗ
ನಗುಮೊಗದಿ ಸಂಕಷ್ಟ ಮರೆಸುವಾಕೆ!
ಈ ಬಾಳ ಜಂಜಡದಿ ಅಲುಗಾಡಿ ನಾ ಮಿಡುಗೆ
ಎಲ್ಲವನು ಬಿಡಿಬಿಡಿಸಿ ತಿಳಿಸುವಾಕೆ.

ಬಂದದ್ದು ಬಂದಿರಲಿ, ಹೋಗುವದು ಹೋಗಿರಲಿ;
ನಾವೀರ್ವರೊಂದಿರಲಿ ಎನ್ನುವಾಕೆ!
ಸುಖವನ್ನು ಬೇಡೆ ನಾ, ಸ್ವರ್ಗವನು ಬೇಡೆನಾ
ನಿಮ್ಮನ್ನೆ ಬೇಡುವೆನು ಎನ್ನುವಾಕೆ.

ತನ್ನನ್ನು ತಾ ಮರೆದು, ತನ್ನದನು ನನಗೆರೆದು,
ನನ್ನದನು ತಾನುಟ್ಟು ನಲಿಯುವಾಕೆ!
ನಾ ಮನೆಗೆ ಬರುವಾಗ ನನ್ನೆದುರುಗೊಳುವಾಗ
ಎಳೆನಗೆಯ ಹೊಳೆಯನ್ನೆ ಹರಿಸುವಾಕೆ..

ನಾನಿನಿತು ಮೌನವನು ಬೆಸಗೊಳ್ಳುತಿರುವಾಗ
ನಸುನಕ್ಕು ಹೊಸ ಕಳೆಯ ತುಂಬುವಾಕೆ.
ಕಂಗಳವು ಕೆಂಪಾಗಿ ಕೆಂಡವನು ಕಾರುತಿರೆ
ಒಳಒಳಗೆ ಮಿಡುಮಿಡುಗಿ ನೋಡುವಾಕೆ.

ನಾನಿರಲಿ, ಇರದಿರಲಿ, ಅವಳನ್ನೆ ಕೂಡಿರಲಿ
ಎಲ್ಲಿದ್ದರೂ ನನ್ನ ಪೂಜಿಪಾಕೆ.
ತಾನೆ ನಾನೆಂದರಿತು, ನಾನೆ ತಾನೆಂದರಿತು
ನನ್ನನ್ನು ಎಲ್ಲೆಡೆಯು ಕಾಣುವಾಕೆ.

ಎಂತಿಹಳೋ ನನ್ನವಳು ನನ್ನನ್ನೆ ನೆನೆವವಳು
ಎಂತಿರುವಳೊ ದೂರದೂರಿನಲ್ಲಿ ?
ಎಂತಿಹಳೊ ನನ್ನರಸಿ, ಮನಸಿಂಗೆ ಮುದವಿರಿಸಿ
ಎಂತಿರುವಳೊ ತನ್ನ ತೌರಿನಲ್ಲಿ ?

# ಇನಿಯನಿಗೆ ಓಲೆ

ಎಂದು ಬರುವಿರಿ, ಎಂದು ಬರುವಿರಿ,
ಬರುವುದಾದರು ಎಂದಿಗೆ?
ಬರುವುದಾಗುವುದಿಲ್ಲವೆಂದರೆ
ನಾನೆ ಬರುವೆನು ಅಲ್ಲಿಗೆ!

ಒಂದೊ....ಎರಡೋ ...ಅಯ್ಯೋ! ಅಯ್ಯೋ!!
ತಿಂಗಳಾಗುತ ಬಂದಿತು;
ಇಲ್ಲಿ ನಾಗರಹಬ್ಬ ತೀರಿದೆ
ತೌರು ತಂಗಳವಾಯಿತು!

"ನಾಲ್ಕು ದಿನಗಳ ಮೇಲೆ ಬರುವೆನು"
ಎಂದು ಹೇಳಿದುದೆಲ್ಲಿದೆ ?
ಎಂದು ಬಂದೆನೊ, ಅಂದಿನಿಂದಲೆ
ವಿರಹದುರಿ ಇಲ್ಲಡರಿದೆ!

ಸೊಗಸುಗಾಣದೆ ಸೊರಗುತಿರುವುದು
ನಿತ್ಯದೊಳಗೆನ್ನಾತ್ಮವು.
ಎಲ್ಲಿ ಅಲೆಯುವೆನಲ್ಲು ತುಂಬಿದೆ
ಬಾಳ ಬಾನನು ಶೂನ್ಯವು!

ನೀವು ಎನ್ನಯ ಬಳಿಯಲಿದ್ದರೆ
ಬಾಳಿಗೆಲ್ಲಾನಂದವು.
ನಾನು ನಿಮ್ಮೊಳಗಡಗಿ ಹೋಗಲು
ಆತ್ಮಲೋಕವೆ ನಂದವು!

ನಿಮ್ಮನುಳಿದರೆ ಮಿಕ್ಕುದೀ ಜಗ
ನನ್ನ ಪಾಲಿಗೆ ಮಿಥ್ಯವು.
ಪ್ರೇಮಮಯವಾಗಿರುವ ನಮ್ಮಯ
ಮಿಲನಸಾರವೆ ಸತ್ಯವು!

ಎಂದು ಬರುವಿರಿ, ಎಂದು ಬರುವಿರಿ
ಬರುವುದಾದರು ಎಂದಿಗೆ ?
ಬರುವುದಾಗುವುದಿಲ್ಲವೆಂದರೆ
ನಾನೆ ಬರುವೆನು ಅಲ್ಲಿಗೆ !

ಬರುವೆನೆಂದರೆ ಸಾಕು ಇನಿಯ
ಮನವು ಅರಳುವ ಮಲ್ಲಿಗೆ !

# ಸಂಸಾರದ ಸೊಗ

ಲೀಲಾಲೋಲಕೆ ರಾಸವಿಲಾಸಕೆ
ರಸಮಯ ಜೀವನ ನಲಿಯುತಿದೆ
ಮೆರೆಯುವ ನಮ್ಮೀ ಮಧು ಸಂಸಾರಕೆ
ವಸಂತದಾಗಮವಾಗುತಿದೆ.
ತನ್ನಿಂತಾನೆಯೆ ತನ್ನುಜ್ವಲತೆಗೆ
ಜೀವ ವಿಕಾಸಕೆ ದುಡಿಯುತಿದೆ,
ಮೇಲೊತ್ತುವ ಈ ಸೃಷ್ಟಿಯ ಭಾರಕೆ
ಬೀಳುತ ಏಳುತ ಸಾಗುತಿದೆ.
(ದೂರದ ಬೆಳಕಿಗೆ ಹಿಗ್ಗುತಿದೆ)
ಆತ್ಮಗಳೆರಡೊಂದಾಗುತ ಅಪ್ಪಲು.
ಜೀವ ರಥೋತ್ಸವ ನಡೆಯುತಿದೆ
ಪ್ರಣಯದ ಪ್ರೇಮವು ನಿರ್ಮಲವಾಗಿರೆ
ಮುಕ್ತಿಯ ಮೆಟ್ಟಿಲು ತೋರುತಿದೆ
ಸಂಸಾರದ ಸೊಗ ಸೂಸುತಿದೆ !

# ತರುಣಿಗೆ-

ಆಶಾ-ನಿರಾಶೆಗಳ ಘರ್ಷಣೆ ಇದೇಕೆ ?
ಮನ ಒಪ್ಪಿದರೆ ನೀನೆ ಬರಬಾರದೇಕೆ ?

ನಾನೆ ನಿನ್ನೆಡೆ ಬಂದು
ಕೇಳಲೇಂ ತರಳೆ ?
ನನ್ನ ಮನ ಸೆಳೆಯುತಿಹ
ಮಿಂಚುಗಣ್ಣೆರಳೆ !
ನಿನ್ನ ತಾರುಣ್ಯಮಯ
ಹೊನಲಿನಲಿ ಮಿಂದು,
ಸವಿವೆನಾನಮೃತವನು
ಪ್ರಣಯದಲಿ ಬಂದು !
ಮಂದಹಾಸದ ಮುಗುಳು
ತಾನೆ ಸುಳಿಯುವದು.
ಮೊಗದ ನಗೆ ನವಿಲಾಡಿ
ನನಗೆ ಕಾದಿಹುದು !
ಮಧುಮಾಸದುದಯದೊಲು
ಪ್ರೇಮ ಉದಿಸುವದು
ನಿನಗಾಗಿ ನನ್ನೆದೆಯು
ಕರೆ ಕರೆಯುತಿಹುದು !

ಆಶಾ-ನಿರಾಶೆಗಳ ಘರ್ಷಣೆ ಇದೇಕೆ ?
ಮನ ಒಪ್ಪಿದರೆ ನೀನೆ ಬರಬಾರದೇಕೆ ?

ನಿನ್ನನ್ನು ಹಗಲಿರುಳು
ನಾ ಕಂಡುಕೊಳುವೆ
ಚಿತ್ತಭಿತ್ತಿಯು ಮೇಲೆ
ಚಿತ್ರವನು ಬರೆವೆ,
ಮತ್ತೆ, ಬಾರಳು ಅಂ
ಎಂದು ನಾ ಕುದಿವೆ;
ಒಂದೆ ಮುತ್ತಿನ ರಸಕೆ
ನಿನ್ನೆಡೆಗೆ ಬರುವೆ!
ನನಗೆ ಅಳ್ಗಡಲಿಹುದು
ನಿನಗದುವೆ ಸೊಗವೆ?
ಇಂತು ಬಿಡುತಿಹ ಬವಣೆ
ನಿನಗಿನಿತು ತರವೆ?
ಎತ್ತು ಮುತ್ತಿಟ್ಟಿನ್ನ
ಸಿಂಗರದ ಸಿರಿಯೆ,
ಹೊತ್ತ ಕೊಲೆಗೈಯುವದು
ಪಾಪವಿದೆ ಕರೆಯೆ!
ನನ್ನ ಜೀವನವೆಲ್ಲ
ನಿನಗೆ ಅಭಿಷೇಕಂ,
ಮೈಗೆ ಮೈ ಸೋಂಕಿದರೆ
ನನಗದುವೆ ನಾಕಂ!

ಆಶಾ–ನಿರಾಶೆಗಳ ಘರ್ಷಣೆ ಇದೇಕೆ?
ಮನ ಒಪ್ಪಿದರೆ ನೀನೆ ಬರಬಾರದೇಕೆ?

# ವೀಣೆ-ವೈಣಿಕ

ನಿನ್ನಯ ತೆಳುವ್ಮೈ ವೀಣೆಯು ಬಾಜಿಸಿ
ಸುಸ್ವರಗೈಯುವ ವೈಣಿಕನಾಂ.
ನಿನ್ನೊಳು ವಿಧವಿಧ ರಾಗವ ಹೊಮ್ಮಿಸಿ
ತೇಲಾಡುವ ವರ ರಸಿಕನು ನಾಂ !
ಮಿಡಿಯುವೆ ನಿನ್ನಂ, ಮುಡಿಯುವೆ ನಿನ್ನಂ
ಹರಿಯುಲು ಮೃದು ಮಧು ಸಂಗೀತಂ
ಪಡೆಯುವಿ ನನ್ನಂ, ಮುಡಿಯುವಿ ನನ್ನಂ
ಏಳಲು ಆವೇಶಾನಂದಂ !

ನನ್ನನು ಮೆಚ್ಚಿಸಲಚ್ಚರಿಗೊಳಿಸಲು
ಬರುತಿದೆನಿನ್ನೆದೆಯಾಮೋದಂ,
ನನ್ನ ಬಂಧಿಸಿ ಪ್ರೇಮಾಜಾಲಕೆ
ಸೆಳೆವದು ನಿನ್ನಾ ಸಂಗೀತಂ !
ನಾನಾಗಲ್ಲಿಯೆ ವಿಸ್ಮಯನಾಗುವೆ
ನಲಿಯುವದಾಗಲೆ ಉದ್ಯಾನಂ;
ನಿನ್ನಿನಿಗೊರಲಿನ ಇಂಚರ ಸೂಸಿರೆ
ಅರಳುವದೆನ್ನೆದೆಯುರವಿಂದಂ !
ನನ್ನಾ ಕೈಗಳು ನಿನ್ನಂ ಪಿಡಿಯುತ
ಮಿಡಿದರೆ ಅದು ಸ್ವರ್ಗಾನಂದಂ !
ನಿನ್ನಯ ತೆಳುವ್ಮೈ ವೀಣೆಯು ಬಾಜಿಸಿ
ಸುಸ್ವರಗೈಯುವ ವೈಣಿಕನಾಂ
ನಿನ್ನೊಳು ವಿಧವಿಧರಾಗವಹೊಮ್ಮಿಸಿ
ತೇಲಾಡುವ ವರ ರಸಿಕನುನಾಂ !

# ಉದಯಗಿರಿಯನೇರಿ ಬಾ !

ವಿರಹದಿಂದ ಉರಿವ ಎದೆಗೆ
ಉದಯಗಿರಿಯನೇರಿ ಬಾ
ಬೆಳಕದಿಲ್ಲ ಬರಿಯ ಇರುಳು
ಉಷೆಯ ರೂಪ ತಾಳಿ ಬಾ !

ದಿಕ್ಕು ದಿಕ್ಕುಗಳನು ಸುತ್ತಿ,
ಪ್ರೇಮಸೊಡರುಗಳನು ಎತ್ತಿ,
ಬಾರೆ ಬೆಳಕ ಹರಿಸುತ;
ಸುಪ್ರಭಾತ ಸುರಿಸುತ.

ಬಾರೆ ಚನ್ನೆ, ಬಾರೆ ರನ್ನೆ
ಬಾರೆ ಹೃದಯ ತಾಣಕೆ,
ರಂಗ-ರಿಂಗಿನಾಟಕೆ !

ಸೂಸುವೆಳೆಯ ನಗುವಿನಿಂದ
ಭಾವ, ಭಂಗಿ ತೋರುತ;
ಅಚಲಭಕ್ತಿ, ಅಚಲಪ್ರೇಮ
ಹಿಮಾಚಲವ ಸೇರುತ.

ನೂರು ಕುತ್ತುಗಳನು ಮೀರಿ,
ವಿಜಯಭೇರಿಯನ್ನು ಸಾರಿ,
ಬಾರೆ ಪ್ರೇಮಯುದ್ಧಕೆ
ಬಾಳ ಸಮರ ರಂಗಕೆ.

ಗೆಲಿದು, ನಲಿದು, ಕುಣಿದು, ಮಣಿದು
ವಿಜಯಕೇತು ಹಾರಲಿ;
ಪ್ರೇಮ ಜಗದಿ ಹಿರಿಯದೆಂದು
ವಿಶ್ವಕೆಲ್ಲ ಸಾರಲಿ !

ಹೃದಯ ಬನದೊಳಾಯ್ದು ಹೂವ
ಹಾರವನ್ನು ನೆಯ್ಯುವಾ,
ಮುತ್ತುಗಳನು ಪವಣಿಸುತ್ತ
ವಯವನೆಲ್ಲ ಕಳೆಯುವಾ !
ಬಾರೆ ಚನ್ನೆ, ಬಾರೆ ರನ್ನೆ
ಬಾರೆ ಜೀವನಾನಕೆ
ರಂಗುರಿಂಗಿನಾಟಕೆ !

# ನನ್ನ ನಿನ್ನ ವೀಣೆಯನ್ನು

ನನ್ನ ನಿನ್ನ ವೀಣೆಯನ್ನು
ನುಡಿಸುವವನೆ ದೇವರು.
ಇಲ್ಲ ಜಗದೊಳಾರು ಮತ್ತೆ,
ನಮ್ಮ ದೇಹ ಮಿಡಿವರು.

ಹೊಮ್ಮುತಿರಲಿ, ಹರಿಯುತಿರಲಿ,
ಪ್ರೇಮವೆಂಬ ರಾಗವು;
ಒಲವು, ಬಲವು ಒಂದುಗೂಡಿ
ಕೂಡಿಬರಲಿ ಯೋಗವು!

ನಿಲ್ಲದುಲಿಯುತುಲಿಯುತಿರಲಿ
ಜೀವದೆರಡು ಎಳೆಗಳು;
ಅನಿಶ ಪ್ರೇಮಗೀತೆಯಿಂದ
ತುಂಬಲೆಮ್ಮ ಎದೆಗಳು.

ಸಾವು–ನೋವುಗಳನು ಮರೆತು
ಬೆಳಗಲೆಮ್ಮ ಭಾವವು.
ಪ್ರಣಯದಮಲ ಪ್ರೇಮದಿಂದ
ನಲಿಯಲೆಮ್ಮ ಜೀವವು.

ದೇವನಿಚ್ಛೆಗಾಗಿ ನಮ್ಮ
ಜೀವ, ಭಾವ ಉಳಿಯಲಿ;
ಅವನ ಕೂಡುವನಕ ನಮ್ಮ
ಬಾಳಿನೊಸಗೆಯಾಗಲಿ !

# ಆಗಮನ

ನಿಮ್ಮ ಪ್ರೇಮಾಲಿಂಗನದ ಚುಂಬನವ ಬಯಸಿ
ನನ್ನ ಅಂಗಾಂಗಗಳು ಕುಣಿಯುತಿಹವು.
ನಿಮ್ಮ ಮೋಹಾಗಮನದಾನಂದದೈಸಿರಿಗೆ
ಧಮಧಮನಿಗಳಲಿ ರಸ ಧುಮುಕುತಿಹುದು.

ನಿಮ್ಮ ಧ್ಯಾನಾನಂದದಿಂದ ಎದೆಯೋಧ್ಯಾನ
ಕೊನರೊಡೆದು ಕಮನೀಯವಾಗಿರುವುದು.
ನಿಮ್ಮನ್ನೆ ಬಯಬಯಸಿ ಬಳಲಿ ಬಾಯಾರುತ್ತ
ಪ್ರೇಮರಾಗದ ಹೊನಲು ಮೊರೆಯುತಿಹುದು.

ಬಾ, ಎನ್ನ ಎದೆಯಾರವಿಂದವೇನೀನಿಂದು
ಮಾನಸದ ತಿಳಿಗೊಳವು ಬತ್ತಬಹುದು;
ನೀವಿಲ್ಲದಿರೆ ಬಾಳು, ಬಯಲಿನಂತೆಸೆಯುವುದು
ಮರುಭೂಮಿಯಂತುರಿಯ ಕಾರಬಹುದು !

ಬಾ, ಎನ್ನ ಮನದನ್ನ ಬಾ, ಇಂದು ಓ ! ಚನ್ನ
ಬಾ ಅಧರ ರಸಪಾನಗೈಯಲೆಂದು.
ನಾಳೆ ಬರುವಿರಿ ಎಂಬ ವಾರ್ತೆಯನು ಅರುಹಿತ್ತೈ
ಹೊತ್ತು ಮುಳುಗದಮುನ್ನ ಓಲೆ ಬಂದು !

# ಕೊನೆಯೋಲೆ !

ಹತ್ತು ತಿಂಗಳಿನುರಿಯು
ಹೊತ್ತಿ ಉರಿಯುತಲಿಹುದು
 * ಕಾಡುಕಾಳ್ಗಿಚ್ಚಿನಲಿ ಕುದಿಯುವಂತೆ,

ಕಮರಿ ಹೋಗುತಲಿಹವು
ಭಾವನೆಯ ಬಳ್ಳಿಗಳು
 ಕುಡಿಯಾಡದಿವೆ ಆಶೆ ಅಳಿಯುವಂತೆ.

ಎತ್ತಣಿಂದಲು ಜ್ವಾಲೆ-
ಯುಗ್ಗಿ ಬಂದಡರುವುದು
 ಮಿತ್ತುಬಂತೆಂಬಂತೆ ನಿತ್ಯದಲ್ಲಿ !

"ನೀನಿಲ್ಲದಿರೆ ನಲ್ಲೆ
ನಾನಿಲ್ಲಿ ಇರಲೊಲ್ಲೆ"
ಎಂದು ನಾನುಸುರಿದ್ದೆನೋಲೆಯಲ್ಲಿ !
"ಬೇಗನೆಯೆ ಬಂದು ಬಿಡು
ಬೇಯುವೆದು ನನ್ನೆದೆಯು
ನೀನಿಲ್ಲದಿರಲಯ್ಯೋ ! ತಾಳೆನಿಲ್ಲಿ"

ಎನಿತೆನಿತೊ ಹೇಳಲಸ-
ದಳವಾದ ದುಃಖದಿಂ
ಬರೆದಿದ್ದೆ ಬಾ, ಎಂದು ನೊಂದುಕೊಂಡು.

ಇಂದಿಗೆರಡಾವೃತ್ತಿ
ಮಾಸಗಳು ಮಾಸಿದವು
      ಬಾರಳೆಂಬಾಶೆಯನು ತುಂಬಿಕೊಂಡು.
ನೀ ಬರುವಿ ಎಂದಾನು,
ಕಾತರಿಸಿ ಕಾಯುವೆನು
      ಬಾರದೊಡನೀ ಉರಿಯ ತಾಳಲಾರೆ.
ಬರುವುದಾದರೆ ಓಲೆ-
ಮುಟ್ಟಿದಾಕ್ಷಣ ಹೊರಡು
      ಕೊನೆಯೋಲೆ ನಾನಿನ್ನು ಬರೆಯಲಾರೆ

# ನೀನು ಮಿಂಚಿ ಮೂಡಿದಾಗ....?

ನೀನು ಮಿಂಚಿ ಮೂಡಿದಾಗ
ಕಣ್ಣು ಕುಕ್ಕಿಕಿದ್ದವು,
ನಿನ್ನ ಹಾಡಿ ಹರಸಲೆಂದು
ಭಾವ ಹಕ್ಕಿ ಉಲಿದವು !

ಸಂಜೆಗೆಂಪಿನಂಬರದಲಿ
ರಾಗ ಒಡೆದು ಮೂಡಿತು;
ಭೂಮಿ–ವ್ಯೋಮದಂತರದಲಿ
ಪ್ರೇಮ ತುಂಬಿಕೊಂಡಿತು !

ಕೊನೆಯು ಕಾಣದಂತೆ ಮನದಿ
ಹರ್ಷದೊಸಗೆಯಾಯಿತು.
ನಿನ್ನ ನೆನೆಯುತಿದ್ದ ನನಗೆ
ಆಶೆಯುದಿಸಿ ಬಂದಿತು !

ಪೊಳೆವ ಕಣ್ಣ ಕಾಂತಿಯಮಳ
ಜ್ಯೋತಿ ಕುಡಿಯ ಚಾಚಿತು !
ಬೆಳಕು ಬೆಳಕ ಮುತ್ತನೊತ್ತಿ,
ಹೊಸತು ಬೆಳಕು ಹಬ್ಬಿತು !

ನಿನ್ನ ರೂಪು ಸಾವಿರಾರು
ಭಂಗಿಯಾಗಿ ನಿಂತಿತು;
ಎದೆಯ ನೀಲ್ಲ ಗಗನದಲ್ಲಿ
ಹಾರಿ, ಅವಿತುಕೊಂಡಿತು !

ಯಾರು ಕೇಳದಂತೆ ತಾನೆ
ಮೌನಗಾನ ಹರಿಸಿತು;
ಜೇನಿನಲ್ಲಿ ಮಿಂದ ತೆರದಿ
ಗಾನಮಧುವ ಸುರಿಸಿತು !

ಬಾನಿನಾಚೆ ನಿಂತೆವು;
ಎದೆಗೆ ಎದೆಯು ಹೊಂದಿಕೊಂಡ
ಒಂದೆ ದೇಹ ಕಂಡೆವು !

ಕಾಣದೊಂದು ಕನಸಿನಲ್ಲಿ
ತೇಲುತಲೆಯುತಿದ್ದೆವು;
ನಾನೆ—ನೀನು, ನೀನೆ—ನಾನು
ಎಂದು ಹಾಡುತಿದ್ದೆವು.

ನೀನು ಮಿಂಚಿ ಮೂಡಿದಾಗ
ಕಣ್ಣು ಕುಕ್ಕುತಿದ್ದವು;
ನಿನ್ನ ಹಾಡಿ ಹರಸಲೆಂದು
ಭಾವ ಹಕ್ಕಿ ಉಲಿದವು !

# ಪರರು ಪಡೆಯಬಲ್ಲರೆ ?

ಹವಣು ಮೀರಿ ಹರಿವ ಹೊಳೆಗೆ
 ಗೋಡೆ ಕಟ್ಟಬಲ್ಲರೆ ?
ನೀರ ಮೇಲೆ ಗೆರೆಯ ಹೊಯ್ದು
 ಭಾಗ ಮಾಡಬಲ್ಲರೆ ?
ಚಿತ್ರದೊಳಗೆ ನಿಂತ ಹುಲಿಯ
 ಕಂಡು ಅಂಜುತಿರುವರೆ ?
ಕೈಲಿ ಬರೆದ ಮುದ್ದು ಮಗುವ
 ಉಣಿಸಿ, ಬೆಳಸಬಲ್ಲರೇ ?
ಬಿಸಿಲು ಬೇಡವೆನಿಸೆ ಸೂರ್ಯ-
 ನನ್ನು ಮುಚ್ಚಿಬಿಡುವರೇ ?
ಬಿಸಿಲುಗುದುರೆಗಳನು ಹತ್ತಿ
 ಪಯಣ ಮಾಡಬಲ್ಲರೇ ?
ಪೈರು ಒಣಗೆ, ನೀರು ಬೇಡಿ
 ಮಳೆಯ ಗರಿಸಬಲ್ಲರೆ ?
ಸಪ್ತರಂಗವನ್ನು ಸುರಿದು
 ಬಾನಬಿಲ್ಲ ಕಡೆವರೆ ?
ಚಿತ್ರಸೃಷ್ಟಿಯಾಗಲೆಂದು
 ನವಿಲುಗರಿಯ ಕೊರೆವರೆ ?
ಕೋಗಿಲೆಯನು ತಂದು, ಅದರ
 ಸ್ವರವ ಗಿಳಿಗೆ ಕೊಡುವರೇ ?

ಹಿಂಜಿದರಳೆ ಬೆಟ್ಟವನ್ನು
ಏರಿ ನಿಲ್ಲಬಲ್ಲರೇ ?
ಕೆಂಡ ಕೆಂಪಗಿರುವುದೆಂದು
ಮುತ್ತನಿತ್ತು ಬರುವರೆ ?
ಚಂದ್ರನನ್ನು ಹಿಡಿಯೆ, ಬಲೆಯು
ಬೀಸಿ ಸೆರೆಯು ಹಿಡಿವರೆ ?
ಮಡದಿಯುಣುವ ಪ್ರೇಮವನ್ನು
ಪರರು ಪಡೆಯಬಲ್ಲರೆ ?

# ನೆನೆಹು

ನಾಳೆ ಬರುವೆನೆಂದು ಹೇಳಿ
ಅಂದು ಹೊರಟು ಹೋದರು.
ಇಂದಿಗಾರು ದಿನವದಾಯ್ತು
ಆದರಿನ್ನು ಬಾರರು !

ಬರುವೆನೆಂದು ಹೇಳುವಾಗ
ಕಣ್ಣು ಹನಿಯಗೂಡಿತು
“ ಮನೆಯ ಕಡೆಗೆ ನೋಕೆ ” ಎನಲು
ಎದೆಯು ತುಂಬಿ ಬಂದಿತು.

“ ಬೇಗ ಬನ್ನಿ ” ಎನ್ನುವಂತೆ
ಕಣ್ಣು ಹನಿಗಳುದುರಲು
ಬರುವವರೆಗೆ ಇಲ್ಲ ಸೊಗಸು
ಎಂದು ಕರುಳು ಕೂಗಲು.

ನೀವು ಇರದ ಬಾಳು ಹಾಳು
ಎಂಬ ತತ್ವ ಹೇಳಲು
ಮೌನದಿಂದ ಮಾತ ನುಡಿದು
ಅಂತರಂಗ ಉಲಿಯಲು,

“ ಇರಲಿ, ಇರಲಿ, ಬರುವೆ ಬೇಗ
ಎಲ್ಲ ನಿನ್ನದಾಗಿದೆ ”
ಎಂದು ಹೇಳಿ ಹೋದರಂದು
ಇಂದು ಮನವು ಸೊರಗಿದೆ !

“ ಹೋಗುವಾಗ ಜೋಕೆಯಿಂದ
ಹೋಗಿ ಬೇಗ ಬನ್ನಿರಿ;
ಬರುವ ಮುನ್ನ ನನ್ನ ಮುಡಿಗೆ
ಮಲ್ಲಿಗೆಯನು ತನ್ನಿರಿ.

ನೋಡಿ ನೀವು ಬರುವ ವರೆಗೆ
ಚಣವು ಒಂದು ಯುಗದೊಲು;
ನನ್ನ ಮನವು ಹಿಂದೆ ಬಹುದು
ನಿಮ್ಮ ಬೆನ್ನ ನೆರಳೊಲು ”

ಎನ್ನುತಾಶೆಯಿಂದ ನುಡಿದೆ
“ ನೆನಹಿಗೇನು ಕೊಡುವಿರಿ ?
ನಿಜಕು ಹೇಳಿ, ಬರುವುದನ್ನು
ಹೇಳಿರೆಂದು ಬರುವಿರಿ ? ”

ಎನ್ನುವಾಗ ಮರಳಿ ಹೊರಳಿ
ನಾಳೆ ಬರುವೆನೆಂದರು;
ನೆನಹಿಗಾಗಿ ನೇಹದಿಂದ
ಎನಗೆ ಮುತ್ತನಿತ್ತರು !

ನಾಳೆ ಬರುವೆನೆಂದು ಹೇಳಿ
ಅಂದು ಹೊರಟು ಹೋದರು.
ಇಂದಿಗಾರು ದಿನವದಾಯ್ತು
ಆದರಿನ್ನು ಬಾರರು !

# ಗುಪ್ತಗಾಮಿನಿ

ತೆರೆಯ ನಿರಿಯ ಚಿಮುಕಿಸುತ್ತ
ಕಡಲ ರಾಣಿ ಕುಣಿವೊಲು,
ಹಸಿರು ಹುಲ್ಲು ಗದ್ದೆಯಲ್ಲಿ
ನಿದ್ದೆ ಗೈವ ಹರಿಯೊಲು,
ಸೊಗವ ಸೂರೆ ಮಾಡುತಿರುವೆ,
ಮುದವ ನೀಡಿ ಮೆರೆಯುತಿರುವೆ;
ಮನದ ಮೋಹಿನಿ !
ಚಿರಂತನವು ಹರಿಯುತಿರುವೆ
ರಸದ ವಾಹಿನಿ !

(೨)

ಎದೆಯ ಕಡಲ ಮಥಿಸಿದಂದು
ಹೊರಟ,ಮಧುವು ನೀನಿಹೆ !
ಕೊಳದಿ ಕುಮುದವರಳು ತಿರಲು
ಉದಿಪ ಚಂದ್ರ ನಾನಿಹೆ !
ನನ್ನ ಸಕಲವಾಗಿ ಇರುವೆ,
ಅಮೃತಕಲಶವನ್ನೆ ಇಡುವೆ,
ರಸಿಕ ಮನೋರಾಗಿನಿ !
ನನ್ನ ಜೀವನಾಡಿಯಾಗಿ
ಹರಿವೆ ಗುಪ್ತಗಾಮಿನಿ !

# ಬಣ್ಣದ ಕಾರಂಜಿ

ಉಕ್ಕುತಲಿಹುದಾನಂದಾವೇಶದಿ
ಬಾಳಿನ ಬಣ್ಣದ ಕಾರಂಜಿ !
ಹೃದಯೋದ್ಯಾನದಿ,
ಧ್ಯಾನಾನಂದದಿ,
ಯೋಗಸಮಾಧಿಯ ಲೋಕದಲಿ,
ಪ್ರಣಯಿಗಳಿದಿಯಾ ನಾಕದಲಿ
ಜೀವನ ಜಮುನೆಯ ಮಧ್ಯದಲಿ,
ತ್ರಿಜಗಜ್ಜೀವನ ಸಾರದಲಿ;
ಉಕ್ಕುತಲಿಹುದಾನಂದಾವೇಶದಿ
ಬಾಳಿನ ಬಣ್ಣದ ಕಾರಂಜಿ !

(೨)

ಭಾವಾವೇಶದೊಳರಳುತಲಿರುವವು
ಅಂತಃಕರುಣದ ಹೂವುಗಳು !
ಲೀಲಾಲೋಲದೊಳೇಳುತಲಿರುವವು
ಹೊಂಗನಸಿನ ಹೊಂಗದಿರುಗಳು.
ಮಧು ಸಂಸಾರದಿ,
ವಸಂತದುದಯದಿ,
ಉಕ್ಕುವ ಬಣ್ಣದ ಬುಗ್ಗೆಯಲಿ;
ನೈಜಪ್ರೇಮ ತುಷಾರದಲಿ !
ಮಧು ಶರಧಿಯ ನಿಡು ಆಳಿನಲಿ,
ಸಂತೃಪ್ತಿಯ ಸಂಯೋಗದಲಿ;
ಉಕ್ಕುತಲಿಹುದಾನಂದಾವೇಶದಿ
ಬಾಳಿನ ಬಣ್ಣದ ಕಾರಂಜಿ !

೩

ಸಾಸಿರರೂಪದ ಸುಂದರ ಭಾವವು
ಸ್ವರ್ಗದ್ವಾರದೊಳಲೆಯುವುದು.
ಚಣದೊಳು ಮೂಜಗದಾಳದಿ ಮೆರೆಯಿಸಿ
ವಿಸ್ಮೃತಿಯಾಳಕೆ ನೂಕುವದು !
ಪ್ರಣಯದ ಪ್ರೇಮದಿ,
ಮಿಲನದ ಸಾರದಿ,
ಮಳೆವಿಲ್ಲಿನ ಮಳೆಗರೆಯುವದು;
ನವ ಅರುಣೋದಯವಾಗುವದು !
ಮುಕ್ತದ್ವಾರವೆ ತೋರುವದು,
ಜೀವ ರಥೋತ್ಸವ ನಡೆಯುವದು;
ಉಕ್ಕುತಲಿಹುದಾನಂದಾವೇಶದಿ
ಬಾಳಿನ ಬಣ್ಣದ ಕಾರಂಜಿ !

೪

ರಾಸಕ್ರೀಡೆಗೆ ಎಳೆಸುತಲಿರುವದು
ರಾಸವಿಲಾಸದ ಮಾಯೆ ಇದು;
ಪ್ರೇಮಪಯೋನಿಧಿ ಇರುವನಕಲ್ಲವೆ
ಬಾಳಿನ ಬುಗ್ಗೆಯು ಉಕ್ಕುವದು ?
ಬಾನಂಗಳದಲಿ,
ಎದೆಯಂಗಳದಲಿ,
ಪ್ರೇಮಜ್ವಾಲೆಯ ಶಿಖರದಲಿ,
ನೈಜಾನಂದದ ಬಾಳಿನಲಿ,
ಉಕ್ಕಲಿ ನಿಮಿನಿಮಿಷಂಗಳಲಿ;
ಪ್ರೇಮಿಗಳೆದೆಯಾ ನಾಕದಲಿ !
ಉಕ್ಕುತಲಿರಲಾನಂದಾವೇಶದಿ
ಬಾಳೊಳು ಬಣ್ಣದ ಕಾರಂಜಿ !

# ಕಾವ್ಯೋದಯ

ಪುಟ ೫೦ (ಕ್ರಾ. ಅ.) ಬೆಲೆ ೦—೧೨—೦

## ಪತ್ರಿಕಾಭಿಪ್ರಾಯಗಳು

ಸರಳವಾದ ಭಾಷೆಯಲ್ಲಿ ತಮ್ಮ ಅಂತಃಕರುಣದಲ್ಲಿ ಉದ್ಭವಿಸಿದ ಭಾವನೆಗಳನ್ನು ವಿವಿಧ ವೃತ್ತಗಳಲ್ಲಿ ಇವರು ಹಾಡಿರುವರು. ಹೇಳುವ ಮಾತಿನಲ್ಲಿ ರಸವುಂಟು, ಆದರಿಂದ ಸೌಂದರ್ಯವೂ ಉಂಟು. ಇದುವೇ ಇವರ ವೈಶಿಷ್ಟ್ಯವು.

ಕವಿಯ ಹೃದಯವು ಕೋಮಲವಿರುವಂತೆ, ಅಂತಃಕರುಣವು ಉದಾರವಾಗಿರುವದು. ಈ ಕವನಗಳ ಪಾವಿತ್ರ್ಯತೆಯನ್ನು ಯಾರೂ ಓದಿ ಸವಿಯಬಹುದು.

**—ತೇಜಸ್ವಿ, ಧಾರವಾಡ.**

ಶ್ರೀ ಸಾಲಿ ರಾಮಚಂದ್ರರಾಯರು ಮುನ್ನುಡಿಯಲ್ಲಿ ಹೇಳಿದಂತೆ **ತೇಜಸಾಂ ಹಿ ನ ವಯಃ ಸಮೀಕ್ಷತೇ** ಎಂದು ಹೇಳಿದುದು ಯಥಾರ್ಥವಾಗಿತೋರುತ್ತದೆ.

ಈ ಕವಿಯ ಕಾವ್ಯವನ್ನು ಸಹೃದಯರಾದ ಕನ್ನಡಿಗರು ಎತ್ತಿ ಮುದ್ದಾಡುವದು ಅತ್ಯವಶ್ಯವೆಂದು ಧಾರಾಳವಾಗಿ ಹೇಳುತ್ತೇವೆ.

**—ವಿಶಾಲಕರ್ನಾಟಕ, ಹುಬ್ಬಳ್ಳಿ.**

ಶ್ರೀ. ಬಣಕಾರರು ಉತ್ತಮ ಕವಿಯಾಗಲೆಂದು ಹರಸುವೆವು.

**—ಕರ್ಮವೀರ, ಹುಬ್ಬಳ್ಳಿ.**

“ ಕವಿಯ ಹೃದಯ ಕೋಮಲವಾದುದು. ಆತನಿಗೆ ಅಶ್ಲೀಲವು ಸ್ವಲ್ಪವೂ ಸೇರದು. ತನ್ನ ಪುಷ್ಪವು ಕಾವ್ಯದೇವಿಯ ಅಡಿಗೆ ಮುಡಿಪಾಗ ಬೇಕೆಂದು ಆತನ ಭಾವನೆ ಇದ್ದುದರಿಂದ ಪ್ರತಿಯೊಂದು ಕವನದಲ್ಲಿಯೂ ಪಾವಿತ್ರ್ಯದ ಸವಿಯನ್ನು ಓದುಗರು ಸವಿಯಬಹುದು.” ಎಂಬ ಮುನ್ನುಡಿಯ ಮಾತು, ಯಥೋಚಿತವಾಗಿದೆ.

**—ನವಯುಗ, ಹುಬ್ಬಳ್ಳಿ.**

ಈ ಬಾಲಕೃತಿಯಲ್ಲಿ ಒಳ್ಳೆಯ ಭವಿಷ್ಯತ್ತಿನ ರೂಪ-ರೇಷೆಗಳನ್ನು ಕಾಣಬಹುದು.

**—ಚಿತ್ರಗುಪ್ತ, ಬೆಂಗಳೂರು.**

........ಹೆಸರೇ ಸೂಚಿಸುವಂತೆ ಈ ಕೃತಿ ಅವರ ಕಾವ್ಯಪ್ರಭೆಯ ಅರುಣರಾಗವನ್ನು ಹಾಡಿದೆ....ಕವಿಗಳಿಗೆ ಜೀವನದ ಅರಿವೂ ಸಾಕಷ್ಟಿದೆ.

**—ಅಂಕುಶ, ಧಾರವಾಡ.**

ಶ್ರೀ. ಬಣಕಾರರಿಗೆ ಕವಿಹೃದಯವಿದೆ. ಕವಿಗಳಿಗೆ ಸಾಮಾನ್ಯ ಸಹಜವಾದ ನಿಸರ್ಗಾರಾಧನೆಗಿಂತ ಸಾಮಾಜಿಕ ದೃಶ್ಯಗಳು ಇವರನ್ನು ಸೆಳೆದಿವೆ. ಅಲ್ಲಲ್ಲಿ ತತ್ವಜ್ಞಾನದ ಒಲವೂ ಕಂಡುಬರುತ್ತದೆ.

**—ಜಯಕರ್ನಾಟಕ, ಧಾರವಾಡ.**

ಶ್ರೀ. ಬಣಕಾರರು ಇನ್ನೂ ಹೆಚ್ಚಿಗೆ ಸಹಜರೀತಿಯ ಕವನಗಳನ್ನು ಹಾಡಿ ಕಾವ್ಯಾಕಾಶದಲ್ಲಿ ಗರಿಗೆದರಿ ಹಾರಲೆಂದು ಹಾರೈಸುವೆವು.

**—ಪ್ರಾಥಮಿಕ ಶಿಕ್ಷಣ, ಧಾರವಾಡ.**

ಕವಿಯಲ್ಲಿ ನಾವು ನೋಡಬಯಸುವ ಭಾವೋದಾತ್ತತೆ, ಕಲ್ಪನಾ ವೈಖರಿ ಮತ್ತು ಕಾವ್ಯದೇವತೆಯಲ್ಲಿ ಐಕ್ಯವಾಗಲೆಳೆಸುವ ಒಂದು ಭಕ್ತಿ ಮಿಶ್ರಿತ ಕಾವ್ಯಪ್ರೇಮ; ಇವೆಲ್ಲವನ್ನೂ ಈ ಕವಿಯಲ್ಲಿ ಕಾಣಬಹುದು....

**—ಭಾರತಿ, ಮುಂಬಯಿ.**